# ರಸ ಋಷಿ

(ಪ್ರಗತಿಶೀಲ ಕವಿತಾಸಂಗ್ರಹ)

ಕವಿಗಳು

ಪಾಟೀಲ ಪುಟ್ಟಪ್ಪ
ಕುಮಾರ ವೆಂಕಣ್ಣ
ಎಸ್. ಅನಂತನಾರಾಯಣ
ಕಾವ್ಯಾನಂದ
ಅರ್ಚಕ ವೆಂಕಟೇಶ
ದೇಸಾಯಿ ದತ್ತಮೂರ್ತಿ
ವಿ. ಜಿ. ಭಟ್ಟ
ಅ ಸೋಗಾಲ
ಸಿ. ಪಿ. ಜೋಗಳೇಕರ
ಕೆ. ಚನ್ನಬಸಪ್ಪ
ಈಶ್ವರ ಸಣಕಲ್ಲ
ಡಿ. ಎಸ್. ಕರ್ಕಿ
ಎಸ್. ಡಿ. ಇಂಚಲ
ಅ. ನ. ಕೃಷ್ಣರಾಯ

---

ಸಂಪಾದಕ

ಅ. ನ. ಕೃಷ್ಣರಾಯ
ಅಧ್ಯಕ್ಷ "ಪ್ರಗತಿಶೀಲ ಲೇಖಕರ ಸಂಘ"
ಬೆಂಗಳೂರು ಶಾಖೆ, ಬೆಂಗಳೂರು

ಪ್ರಕಾಶಕರು

ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು
ಮತ್ತು
ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ

೧೪೨ ಪುಟ] [ಬೆಲೆ ರೂ. ೧—೮—೦

ಬೆಂಗಳೂರಿನ

## ಪ್ರಗತಿಶೀಲ ಲೇಖಕರ ಸಂಘದ ಪ್ರಕಟನೆಗಳು

ಪ್ರಧಾನ ಸಂಪಾದಕ : ಅ. ನ. ಕೃಷ್ಣರಾಯ

---

೧. ಭಾರತ ಶಕ್ತಿ : ಕುಮಾರ ವೆಂಕಣ್ಣ

೨. ನನ್ನನ್ನು ನಾನೇ ಕಂಡೆ : ಅ. ನ. ಕೃಷ್ಣರಾಯ

೩. ಪ್ರಗತಿಶೀಲ ಸಾಹಿತ್ಯ : ಸಂ. ಅ. ನ. ಕೃಷ್ಣರಾಯ

೪. ತಲೆಹರಟೆ : ನಾಡಿಗೇರ ಕೃಷ್ಣರಾಯ

೫. ಮ್ಯಾಕ್ಸಿಂ ಗಾರ್ಕಿ : ಸಂ. ಅ. ನ. ಕೃಷ್ಣರಾಯ

೬. ರಸಋಷಿ (ಕವಿತೆ) : ಸಂ. ಅ. ನ. ಕೃಷ್ಣರಾಯ

* ೭. ರಷ್ಯಾದ ಸಾಹಿತ್ಯ ಇತಿಹಾಸ : ತಿ. ತಾ. ಶರ್ಮನ್

* ೮. ದುರಂತ ಚಿತ್ರಗಳು (ಕತೆ) : ಅರ್ಚಕ ವೆಂಕಟೇಶ

* ೯. ಗಾರ್ಕಿಯ ಜೀವನ ಚರಿತ್ರೆ : ಎ. ರಾಸ್ಕಿನ್

* ೧೦. ತಾಯಿಮಣ್ಣು (ಕಾದಂಬರಿ) : ತ. ರಾ. ಸುಬ್ಬರಾಯ

* ೧೧. ಶೀನಪ್ಪನ ಕೂಲಿ ( ,, ) : ಕುಮಾರ ವೆಂಕಣ್ಣ

* ೧೨. ಧೂಳು–ಹೊಗೆ ( ,, ) : ಕೆ. ನಾಗೇಶರಾಯ

---

ಸದ್ಯದಲ್ಲೇ ಪ್ರಕಟವಾಗುತ್ತವೆ.

---

ಮುದ್ರಕರು
ಎಚ್. ಎಲ್. ಪ್ರಸಾದ್,
ಟಾರ್ಚ್ ಪ್ರೆಸ್, ಬೆಂಗಳೂರು ಸಿಟಿ

# ಮುನ್ನುಡಿ

ಆಧುನಿಕ ಕನ್ನಡ ಕಾವ್ಯದ ಬೆಳೆ ಕಾಲು ಶತಮಾನದ್ದು. ಸಂಸ್ಕೃತ ಚಂಪೂ ಶೈಲಿಯ ಶೃಂಖಲೆಯನ್ನು ಕಳಚಿ ನಿಂತ ಕಾವ್ಯಕ್ಕೆ ಕನ್ನಡ ಷಟ್ಪದಿಯೂ ಕಾಲಾನುಕಾಲಕ್ಕೆ ಒಂದು ಶೃಂಖಲೆಯಾಗುತ್ತ ಬಂತು. ಅದನ್ನು ಕಳಚಿ ಕನ್ನಡ ಜನತೆಯ ಛಂದಸ್ಸಾದ ತ್ರಿಪದಿಯನ್ನು ಸರ್ವಜ್ಞ ತನ್ನ ಪ್ರತಿಭೆಯಿಂದ ಎಲ್ಲೆಡೆಯಲ್ಲಿಯೂ ಹರಡಿದ. ಬ್ರಿಟಿಷ್ ಚಕ್ರಾಧಿಪತ್ಯ ಭಾರತವರ್ಷದಲ್ಲಿ ಬೇರುಬಿಟ್ಟ ತರುಣದಲ್ಲಿ ಕನ್ನಡ ನಾಡಿನ ಸಾಹಿತ್ಯ ಬೆಳವಣಿಗೆ ನಿಂತು ಹೋಯಿತು. ಆದರೆ ಈ ಶತಮಾನದಾರಂಭದಲ್ಲಿ ಕನ್ನಡಿಗರಿಗೆ ಪಡುವಣ ಕಡೆಯ ಬೆಳಕು ಕಂಡು ಬಂದಿತು. ಇಂಗ್ಲಿಷ್ ಕವಿಗಳ ಸ್ವಚ್ಛಂದ ಛಂದಸ್ಸು, ಅವರ ನೂತನ ವಿಚಾರವಾಹಿನಿ, ಜನಮನವನ್ನು ಎತ್ತಿತೋರಿಸುವ ಅವರ ಮನೋಭಾವ ಕನ್ನಡಿಗರ ಕಣ್ಮನಗಳನ್ನು ಸೆರೆಹಿಡಿಯಿತು. ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಇಂಗ್ಲಿಷ್ ಸಂಸ್ಕೃತಿಯ ಇನಿವಣ್ಣುಗಳನ್ನಾಯ್ದು ದಿವ್ಯವಾಗಿ ಕನ್ನಡಿಸಿದರು. ಒಂದು ಕಡೆ ಇಂಗ್ಲಿಷ್, ಗ್ರೀಕ್ ಸಂಸ್ಕೃತಿಗಳ ವಿವಿಧ ವೈಖರಿಗಳನ್ನು ಕನ್ನಡಕ್ಕೆ ತಂದುಕೊಂಡು, ಕನ್ನಡವನ್ನು ನವನವೋನ್ಮೇಷಶಾಲಿನಿಯಾಗಿ ಮಾಡಬೇಕೆಂಬ ಪ್ರಯತ್ನ; ಮತ್ತೊಂದು ಕಡೆ ಕನ್ನಡ ಸಂಸ್ಕೃತಿ, ಕನ್ನಡಿಗರ ಬಾಳನ್ನೇ ಎತ್ತಿಹಿಡಿದು ಅವು ತೋರುವ ಸುಪ್ತಲೀಲಾವಿಲಾಸದ ವೈಖರಿಯನ್ನು ಜನತೆಗೆ ತೋರಬೇಕೆಂಬ ಪ್ರಯತ್ನ – ಹೀಗೆ ಎರಡು ಮುಖದಲ್ಲಿ ಕನ್ನಡ ಕಾವ್ಯ ಬೆಳೆಯಲಾರಂಭಿಸಿತು. ಶ್ರೀಗಳಾದ ಮಾಸ್ತಿ, ಬೇಂದ್ರೆ, ಪುಟ್ಟಪ್ಪ, ವಿ.ಸೀ., ಸಾಲಿ, ಶಂಕರಭಟ್ಟ ಅವರ ಗೀತೆಗಳನ್ನು ಬರೆದು ಕನ್ನಡ ಕಾವ್ಯಕ್ಕೆ ಒಂದು ಅಸ್ತಿತ್ವವನ್ನು ತಂದುಕೊಟ್ಟರು. ಕಾವ್ಯದ ಮೂಲಕ ಕನ್ನಡಿಗರ ಜೀವನವಿಕಾಸವನ್ನು ಸಾಧಿಸುತ್ತಿದ್ದ ಕವಿಗಳಲ್ಲಿ ಬೇಂದ್ರೆಯವರಾಗಲೇ ಜನತೆಯ ಭಾಷೆ, ಭಾವನೆ, ಛಂದಸ್ಸುಗಳನ್ನು ಅಳವಡಿಸಿಕೊಂಡು ಅವುಗಳ ಮೇಲೆ ತಮ್ಮ ಪ್ರತಿಭೆಯ ಮುದ್ರೆಯನ್ನೊತ್ತಿದ್ದರು. ಶ್ರೀ ರಾಜರತ್ನಂ ಅವರು ತಮ್ಮ ಎಂಡಕುಡುಕನ ಪದ್ಯಗಳಿಂದ ಕಾವ್ಯಕ್ಕೆ ಹೆಚ್ಚು ಜೀವನಸಾಮೀಪ್ಯವನ್ನು ತಂದುಕೊಟ್ಟರು. ಕವಿಗಳು ಜನತೆಯನ್ನು ಬೆಳಗಿಸತೊಡಗಿದಾಗ ಅವರನ್ನು ಬೆಳಗಿಸುವ ಸಾಹಿತ್ಯಸಾಧನ ಬೇಕಾಗಿತ್ತು. ಶ್ರೀ ಡಿ. ವಿ. ಗುಂಡಪ್ಪ

ನವರು 'ಕವಿಗಳ ಕವಿ' ಯಾಗಿ ಪ್ರಗಲ್ಭ ಕಾವ್ಯಧಾಟಿಯನ್ನಾರಂಭಿಸಿದರು. ಜೀವನ ಪೃಥಕ್ಕರಣ ಸಂಸ್ಕರಣಗಳನ್ನೇ ಗುರಿಯಾಗಿಟ್ಟುಕೊಂಡು, ವಿಚಾರ ವೈಭವವನ್ನು ಮೂಡಿಸಿ ಶ್ರೀ ಗುಂಡಪ್ಪನವರು ಈಚೆಗೆ 'ಮಂಕುತಿಮ್ಮನ ಕಗ್ಗ'ವನ್ನು ರಚಿಸಿದ್ದಾರೆ. ವರಕವಿಗಳೊಂದಿಗೆ ನರಕವಿಗಳೂ ಹೇರಳವಾಗಿ ಕನ್ನಡ ಕಾವ್ಯ ಪ್ರಪಂಚವನ್ನು ಮುತ್ತಿದರು. ಕಾವ್ಯ ಬರೆಯುವುದು ಸುಲಭವೆಂದೋ, ಅದಕ್ಕೆ ಸಾಕಷ್ಟು ಶ್ರಮ, ನಿಷ್ಠೆ, ಚಿತ್ತೈಕಾಗ್ರತೆ ಬೇಕಿಲ್ಲವೆಂದೂ ಕನ್ನಡ ಬರೆಯಬಲ್ಲ ಅನೇಕರು ಶಬ್ದಗಳನ್ನು ತಿದ್ದಿ, ಭಾವನೆಗಳನ್ನು ಹೊಸೆದು, 'ಸರಸ್ವತಿಯ ಗೋಣ್ಮುರಿಯುವ' ಕವಿತೆಗಳನ್ನು ಬರೆಯಲಾರಂಭಿಸಿದರು. ಕಾವ್ಯದ ಈ ಅತಿವ್ಯಾಪ್ತಿಯಿಂದ ಸುಭಗವಾದ ಗದ್ಯಶೈಲಿಯ ಬೆಳವಣಿಗೆಗೆ ಧಕ್ಕೆ ತಗಲಿತು. ಉತ್ತಮ ಸಾಹಿತಿಗಳಾಗುವ ಕುರುಹು ತೋರಿದ ಕಿರಿಯರನೇಕರು ಕವಿತೆ ಬರೆಯುವ ಚಾಪಲ್ಯಕ್ಕೆ ಬಿದ್ದು ತಮ್ಮ ಸಾಹಿತ್ಯಜೀವನವನ್ನು ನಿರರ್ಥಕ ಮಾಡಿಕೊಂಡರು.

ಸುಮಾರು ಒಂದು ದಶಕದ (೧೯೩೦-೪೦) ಕಾವ್ಯವನ್ನು ನಾವು ಪರೀಕ್ಷಿಸಿದರೆ ಹೆಚ್ಚಾಗಿ ಕಂಡುಬರುವ ವಸ್ತುಗಳು: ಹೂಬಳ್ಳಿಗಳ ವರ್ಣನೆ, ಅಪಕ್ವ ಶೃಂಗಾರ ವಿಲಾಸ, ಕನ್ನಡದ ಬಗ್ಗೆ ಕೊರಗು. ಜೀವನದ ಮುಂದೆ ಹಿರಿಯ ಗುರಿಯನ್ನಿಟ್ಟುಕೊಂಡು ಅದಕ್ಕೆ ನಾಡವರನ್ನು ಒಯ್ಯುವ ಸಬಲ ಮನೋಭಾವ, ಧೀಶಕ್ತಿ ಕಂಡು ಬರುವುದಿಲ್ಲ. ಈ ಕಾವ್ಯಗಳಿಂದ ಬೇಸತ್ತ ಕನ್ನಡಜನ ಕಾವ್ಯವೆಂದರೆ ಮುಖ ತಿರುಗಿಸಲಾರಂಭಿಸಿದರು. ಮತ್ತು ಗದ್ಯಶೈಲಿಯ ಪ್ರಚಂಡ ಪ್ರವಾಹ ಬಂದು ಕಾವ್ಯದ ಬೆಳವಣಿಗೆಯನ್ನು ತಡೆಹಾಕಿತೆಂದೂ ಕಾಣಬರುತ್ತದೆ.

ಈ ಘೋರ ಯುದ್ಧ ನಮ್ಮ ಜೀವನ, ವಿಚಾರ, ಭಾವನೆಗಳನ್ನು ಪ್ರತಿಭಟಿಸಿ ನಿಂತಿತು. ಬಾಳು ಒಂದು ಹೊರೆಯಾಗುತ್ತ ಬಂತು. ಇಂತಹ ರಾಕ್ಷಸೀ ಜಗತ್ತಿನಲ್ಲಿ ಬಾಳುವುದಕ್ಕಿಂತ ಪ್ರಾಣಬಿಡುವುದು ಲೇಸೆಂದು ಸ್ಟೀಫನ್ ಜ್ವೈಗನಂತಹ ಸಿದ್ಧಸಾಹಿತಿಗಳು ಆತ್ಮಹತ್ಯ ಮಾಡಿಕೊಂಡರು. ಕನ್ನಡ ನಾಡಿಗೂ ಯುದ್ಧದ ಬಿಸಿ ತಗುಲಿತು. ಎಲ್ಲೆಲ್ಲಿಯೂ ಕೂಳಿನ ಹಾಹಾಕಾರ, ಜನತೆಯನ್ನು ಸುಲಿದು ಪ್ರೇತ ಮಾಂಸದಿಂದ ಬೆಳೆದು ಬಲಿಷ್ಠವಾಗುತ್ತಿದ್ದ

**ಬಂಡವಾಳಗಾರರ ಹೀನವರ್ತನೆ, ಸರಕಾರದ ಅಕ್ಷಮ್ಯ ಕರ್ತವ್ಯಲೋಪ ಕವಿಗಳ** ಮುಂದೆಯೂ ತನ್ನ ಬೃಹದಾಕಾರವನ್ನು ತಾಳಿ ನಿಂತಿತು. ಈ ಪ್ರಳಯದಲ್ಲಿ ಕವಿ ನಿರುತ್ಸಾಹಿಯಾಗಿ, ತನ್ನ ಸೋಲನ್ನೊಪ್ಪಿಕೊಂಡು, ಘಟನೆಗಳೊಂದಿಗೆ ಸಾಗಬೇಕೆ--ಅಥವಾ-ತನ್ನ ಆತ್ಮಬಲದಿಂದ ಜನತೆಗೆ ಧೈರ್ಯ, ಕೆಚ್ಚು, ದುಃಖೋಪಶಮನಸಾಮರ್ಥ್ಯಗಳನ್ನೊದಗಿಸಿ ಕೊಡಬೇಕೇ? ಎಂಬ ಮಹಾ ಪ್ರಶ್ನೆ ಮುಂದೆ ಬಂದು ನಿಂತಿತು. ಕನ್ನಡ ಕಾವ್ಯಪ್ರಪಂಚವನ್ನು ಕಟ್ಟಿ, ಬೆಳಸಿದ ಕವಿಗಳು ಏಕೋ ಏನೋ ಕೈಕಟ್ಟಿ ಕುಳಿತರು; ಇಲ್ಲ, ಅವ್ಯಕ್ತ ಆಧ್ಯಾತ್ಮ ವಾದದಲ್ಲಿ ಸ್ವಮರೆತು ಸಾಧುಸಂತರು, ಯೋಗಿ ತ್ಯಾಗಿಗಳ ಬೆನ್ನು ಹತ್ತಿದರು.. 'ದೇವರು ಬರಬೇಕಾದರೂ ಬಡವನಿಗೆ ಅನ್ನದ ರೂಪಿನಿಂದಲೇ ಬರಬೇಕು' ಎಂದು ಗಾಂಧಿಜಿಯವರು ಹೇಳಿದ ಮಾತು ಹಲವರ ಕಿವಿ ಹೊಗಲಿಲ್ಲ. 'ಹಸಿದವನಿಗೆ ದೇವರಿಲ್ಲ' ಎಂದ ಸ್ವಾಮಿ ವಿವೇಕಾನಂದರ ಸಿಡಿಲ ನುಡಿ ಕವಿಗಳಿಗೆ ಮರೆತುಹೋಯಿತು. ಪರಿಸ್ಥಿತಿಯನ್ನು ಎದುರಿಸಲಾರದ ದೌರ್ಬಲ್ಯ, ಅದನ್ನು ಮೇಲಕ್ಕೆತ್ತಿ ಸೂಕ್ತ ರಚನಾತ್ಮಕ ಕಾರ್ಯಕ್ರಮವನ್ನು ಕೈಗೊಳ್ಳಲಾಗದ ಅಳುಕು ಕವಿಗಳಲ್ಲಿ ತಲೆದೋರಿತು.

ಕನ್ನಡ ಸಾಹಿತ್ಯಕ್ಕೆ ವಿರಸಮುಖದ ಅಗತ್ಯವುಂಟಾಯಿತು. ಸಾವಿರಾರು ವರ್ಷಗಳಿಂದ ಬೆಳೆದುಬಂದಿದ್ದ ವೃಕ್ಷ ಹೂಗ ನನಿಸುವುದಕ್ಕೆ ಅವಕಾಶ ಕೊಡುವುದು ತಪ್ಪೆನಿಸಿತು. ಆದರೆ ಹಿಂದಿನ ಹಾದು ಹಿಡಿದು ಅದು ಬೆಳೆಯುವ ಹಾಗಿರಲಿಲ್ಲ. ಹೊಸಬೆಳಕು, ಹೊಸನೀರು, ಹೊಸ ಕ್ಷೇತ್ರನ್ನ ಅದಕ್ಕೆ ಬೇಕೇ ಬೇಕಾಯಿತು. ೧೯೪೩ನೆಯ ನವೆಂಬರ್ ತಿಂಗಳಲ್ಲಿ ಸ್ಥಾಪಿತವಾದ ಅಖಿಲ ಭಾರತೀಯ ಪ್ರಗತಿಶೀಲ ಲೇಖಕರ ಸಂಘ - ಬೆಂಗಳೂರು ಶಾಖೆ ಈ ಹೊಣೆಯನ್ನು ಹೊತ್ತಿತು. ತನ್ನ ಮೊದಲನೆಯ ಪ್ರಕಟನೆ 'ಭಾರತಶಕ್ತಿ' ಯಲ್ಲಿಯೇ ಈ ಮಾರ್ಗವನ್ನು ಆವಿಷ್ಕರಿಸಿ, ಒಂದು ಹೊಸ ಪ್ರಪಂಚವನ್ನು ಕನ್ನಡಿಗರಿಗೆ ಮಾಡಿಕೊಟ್ಟಿತು. ಈ ಪ್ರಯತ್ನ ಹೆಚ್ಚು ವಿಸ್ತೃತವಾದದ್ದು. ಕನ್ನಡನಾಡಿನ ಎಲ್ಲ ಕಡೆಯ ತರುಣ ಕವಿಗಳ ಪ್ರಯತ್ನ ಫಲವೇ "ರಸಋಷಿ". ಹದಿನಾಲ್ಕು ಕವಿಗಳು ತಮ್ಮ ಹೃದಯವನ್ನು ತೋಡಿಕೊಂಡಿದ್ದಾರೆ. ಅನ್ಯಾಯ **ಅತ್ಯಾಚಾರ, ಅಂಧಕಾರ, ಅಜ್ಞಾನಗಳ ಬಗ್ಗೆ ತಮ್ಮ ವಿಚಾರಖಡ್ಗವನ್ನು ಝಳಪಿಸಿದ್ದಾರೆ. ಬಂಗಾಳ, ಕೇರಳ, ವಿಜಾಪುರಗಳಲ್ಲಿ ಆದ 'ಕೃತ್ರಿಮ**

ಜ್ಞಾನ' ದ ಬಗ್ಗೆ ಜನಕ್ಕೆ ಸರಿಯಾದ ತಿಳಿವನ್ನು ನೀಡಿ 'ಅಂಜಬೇಡಿ-ಅಳುಕಬೇಡಿ-ನಾಳಿನ ಭಾರತ-ನಾಳಿನ ಜಗತ್ತು ನಿಮ್ಮದು-ನಾಳಿನ ವಸಂತಲಕ್ಷ್ಮಿಯ ಬರುವಿಗೆ ಇದು ನಾವು ಚೆಲ್ಲಿದ ಓಕುಳಿ' ಎಂದು ಧೈರ್ಯ ಸ್ಥೈರ್ಯಗಳನ್ನು ತುಂಬಿದ್ದಾರೆ. ನವಜಗತ್ತಿನ ನಿರ್ಮಾಪಕರಾದ ಮಾರ್ಕ್ಸ್, ಲೆನಿನ್, ಗಾಂಧಿ, ಅಪ್ಟನ್ ಸಿಂಕ್ಲೇರ್, ಇಕ್ಬಾಲ್, ರವೀಂದ್ರರ ಮೇಲ್ಪಂಕ್ತಿಯನ್ನು ನೆನೆದು ತಮ್ಮ ಭಕ್ತಿಯನ್ನರ್ಪಿಸಿದ್ದಾರೆ. ಜೀವನದ ಸರ್ವತೋಮುಖ ಬೆ-ಳವಣಿಗೆಗೆ ಬೇಕಾದ ಅನೇಕ ಮಹದ್ವಿಷಯಗಳನ್ನು ಚರ್ಚಿಸಿದ್ದಾರೆ.

ಪ್ರಗತಿಶೀಲ ಲೇಖಕರು ಮನಸ್ಸಿನ ಅನೇಕ ಪದರುಗಳನ್ನು ತೆಗೆದು ಹಾಕಿ, ಜನತೆಯ ಮುಂದೆ ನಿಂತಾಗ ಅವರ ಮೇಲೆ ಆಕ್ಷೇಪಗಳ ಸುರಿಮಳೆಯಾಯಿತು. ಮನುಷ್ಯನನ್ನು ಅಜ್ಞಾನಾಂಧಕಾರದಲ್ಲಿ ಮುಳುಗಿಸುವ ಜ್ಞಾನ, ಸೌಂದರ್ಯ ಎಷ್ಟು ದೊಡ್ಡದಾದರೂ ಎಷ್ಟು ಹಳೆಯದಾದರೂ ನಮಗೆ ಬೇಡವೆಂದರು. ಹಳೆಯದೆಂದರೆ ಇವರಿಗಾಗದು-ರಾಮಾಯಣ ಮಹಾಭಾರತಗಳನ್ನು ಪ್ರಗತಿಶೀಲರು ತೆಗಳುತ್ತಾರೆ ಎಂದರು ಪ್ರತಿವಾದಿಗಳು. ಕ್ರೌಂಚ ಮಿಥುನ ಭಂಗವನ್ನು ಕಂಡ ಮಹಾಕವಿಯ ಹೃದಯ ಝಲ್ಲೆನಿಸಿ, ಅವನ ಕಂಠ ಅನುಕಂಪದಿಂದ ಉಬ್ಬಿ ದುಃಖಾಶ್ರು ಧಾರಾಕಾರವಾಗಿ ಪ್ರವಹಿಸಿ, ಸಾಂತಃಕರಣವೇ ಮಹಾಕಾವ್ಯವಾಗಿ ಹರಿಯಿತು. ಕವಿ ಕಣ್ಣುಬಿಟ್ಟು ನೋಡಿ 'ನಾನು ಕವಿತೆ ಬರೆದಿದ್ದೇನೆ' ಎಂದು ಆಶ್ಚರ್ಯಪಡುವಂತಾಯಿತು. ಈ ಅನುಕಂಪ, ಭಾವನಾವೇಶ ಯಾರಿಗೆ ಬೇಡ? ಯಾವ ಕಾಲಕ್ಕೆ ಬೇಡ? ಯಾವ ದೇಶಕ್ಕೆ ಬೇಡ? ಇಂತಹ ಎಷ್ಟು ಸಾವಿರ ಮಾನವ ಕ್ರೌಂಚಗಳು ಇಂದು ಸಾಮ್ರಾಜ್ಯಶಾಹೀ ಬೇಡನ ಕೂರಂಬಿಗೆ ಸಿಕ್ಕಿ ಘಾತವಾಗುತ್ತಿಲ್ಲ-ಎಷ್ಟು ಲಕ್ಷ ಪ್ರೇಮದ ಗೂಡುಗಳಿಂದು ಭಸ್ಮೀಭೂತವಾಗುತ್ತಿಲ್ಲ! ಒಬ್ಬ ಸಾಧ್ವಿಯ ಮಾನರಕ್ಷಣೆಗೆ ವಾನರ, ಭಲ್ಲೂಕಗಳು ಕೂಡ ಜಗಜ್ಜೇತ ರಾವಣನ ಮೇಲೆ ಕತ್ತಿ ಹಿರಿದು ನಿಂತ ಕಥೆಯನ್ನು ಮಹಾಕಾವ್ಯವನ್ನಾಗಿ ಅಂದು ವಾಲ್ಮೀಕಿ ಬರೆದು ಮಾರ್ಗದರ್ಶಕನಾದ. ಇಂದು ಹೊಟ್ಟೆಗಾಗಿ, ಬಟ್ಟೆಗಾಗಿ ಎಷ್ಟು ಜನ ಸಾಧ್ವಿಯರ ಮಾನಾಪಹಾರವಾಗುತ್ತಿಲ್ಲ. ಎಷ್ಟು ಜನ ತಾಯ್ತಂದೆಗಳು ತಮ್ಮ ಮಕ್ಕಳನ್ನು ಸಾಕಲಾರದೆ ವ್ಯಭಿಚಾರ ಗೃಹಗಳಿಗೆ ಮಾರುತ್ತಿಲ್ಲ. ಇಂದಿನ ... ಪ್ರಗತಿಶೀಲ ಸಂಘವು

ಸ್ವರವೇಕೆ ಏಳುತ್ತಿಲ್ಲ? ರಾಮಾಯಣ, ಭಾರತಗಳು ಅಂದಿನ ಕಥೆಗಳಲ್ಲ-ಇಂದಿನ ಕಥೆಗಳೂ ಆಗಿವೆ. ಅಂದು ನಾವು ವಾಲ್ಮೀಕಿ ವ್ಯಾಸರಿಂದ ಕಂಡ ರಾವಣ, ಕುಂಭಕರ್ಣ, ದುರ್ಯೋಧನ, ದುಶ್ಶಾಸನ ಎಲ್ಲ ಕಾಲಗಳ ವ್ಯಕ್ತಿಗಳಾಗಿದ್ದಾರೆ. ರಾವಣ, ದುರ್ಯೋಧನರ ನೀಚಲಾಲಸೆ, ಕ್ರೌರ್ಯ, ಸ್ವಾರ್ಥ, ರಾಜ್ಯದಾಹಗಳ ಪ್ರತಿಯೋಧಿಗಳಾಗಿ ವಾಲ್ಮೀಕಿ ವ್ಯಾಸರು ತಮ್ಮ ಲೇಖನಿ ಖಡ್ಗಗಳನ್ನು ಹಿಡಿದೆತ್ತಿ ನಿಂತರು. ವಾಲ್ಮೀಕಿಯ ಹೆಸರು ಮೆರೆಸುವ ಇಂದಿನ ಕವಿಗಳಲ್ಲಿ ಆ ಧೀರ ಮನೋಭಾವವೇನಾಯಿತು? ಅಂದಿನ ರಾಮನ ಆದರ್ಶ ಎತ್ತಿ ಹಿಡಿಯುವ ಕವಿಗಳಿಗೆ ಇಂದಿನ ರಾಮ-ಮಹಾತ್ಮಾ ಗಾಂಧಿ ಕಾಣದಾದನೆ? ಅಂದಿನ ನಚಿಕೇತನ ಆದರ್ಶದ ಕಡೆಗೆ ಕೈತೋರಿಸುವ ಕವಿಗಳಿಗೆ ಇಂದಿನ ನಚಿಕೇತ-ಜವಾಹಿರಲಾಲ್ ನೆಹ್ರೂ ಕಣ್ಣಿಗೆ ಬೀಳನೇಕೆ?

ಪ್ರಾಚೀನ ಪುರಾಣ-ಕಾವ್ಯಗಳು ಅಂದಿನ ಜೀವನದ ಕನ್ನಡಿಗಳು. ಜೀವನವನ್ನು ತಿದ್ದುವುದಕ್ಕೆ ಬೆಳೆಸುವುದಕ್ಕೆ ಅವು ಮಾಡಿದ ಸೇವೆ ಅಷ್ಟಿಷ್ಟಲ್ಲ. ಆ ಆದರ್ಶವನ್ನು ಪ್ರಗತಿಶೀಲರು ಮರೆತಿಲ್ಲ. ಆದರೆ ಹಳೆಯದನ್ನು ನೆನೆಸಿಕೊಂಡು, ಅದರ ಗುಣಗಾನದಲ್ಲಿಯೇ ಕೂಡುವುದು ಅವರಿಗೆ ಸಲ್ಲದು, ಒಪ್ಪಿಗೆಯಾಗದು. ಅಂದಿನ ರಾಮನನ್ನು ಪೂಜಿಸುತ್ತ ಕುಳಿತರೆ ಸಾಲದು. ಇಂದು ನಾವು ೪೦೦ ಕೋಟಿ ಜನ ಹೇಗೆ ರಾಮ-ಕೃಷ್ಣರ ಅವತಾರಿಗಳಾಗಬಹುದು ಎಂಬುದರ ಕಡೆಗೆ ಹೋಗಬೇಕು ನಮ್ಮ ಲಕ್ಷ್ಯ. ಪ್ರಗತಿಶೀಲರು ಅಜಿತರು, ಆಶಾವಾದಿಗಳು. ಲೋಕದಲ್ಲಿ ಎಷ್ಟು ಅತ್ಯಾಚಾರ, ಕ್ರೌರ್ಯ, ಹಿಂಸೆ ತಾಂಡವವಾಡಿದರೇನು, ಮಾನವಾಂತರ್ಗತವಾದ ಪ್ರೇಮ, ದಯೆ, ಕರುಣೆ, ಅಹಿಂಸೆ ತನ್ನ ಪ್ರಭೆಯನ್ನು ಬೀರೇ ಬೀರುತ್ತದೆ. ನಿರಾಶೆಗೊಂಡು, ಬಾಳಿನಲ್ಲಿ ಬೇಸತ್ತು, ಬದುಕಿಗಿಂತ ಸಾವು ಮೇಲೆಂದು ಮನಗುಂದಿ, ಕಳೆಗುಂದಿ ಕುಳಿತಿರುವ ನಾಡವರಲ್ಲಿ ಧೈರ್ಯ, ಆಸೆ, ಸತ್-ಕಾಂಕ್ಷೆಗಳನ್ನು ಬಿತ್ತುವುದು ನಮ್ಮ ಆದ್ಯ ಕರ್ತವ್ಯ. ಕವಿ ನಾಡಗುರು; ಅವನ ಕಣ್ಣು ನಾಡಿನ ಕಣ್ಣು; ಅವನಾತ್ಮ ಸರ್ವಭೂತಾತ್ಮ. ಕವಿಗೆ ಸ್ವಸ್ವರೂಪ ಜ್ಞಾನವಾಗಬೇಕು. ಲೋಕದ ವೃತ್ತಿ ಪ್ರವೃತ್ತಿಗಳಲ್ಲಿ ಅವನ ಸ್ಥಾನಮಾನದ ಅರಿವು ಮೊದಲು ಅವನಿಗೇ ಆಗಬೇಕು. ಜೀವನದ ಸಮಸ್ಯೆಗಳನ್ನು, ಸಂಕಷ್ಟಗಳನ್ನು ಅವನು ಗಂಡೆದೆ

ಯಿಂದ ಎಚ್ಚರಿಸಿ ಅಜ್ಞೇಯನಾಗಬೇಕು. ಇದು ಪ್ರಗತಿಶೀಲರ ನೋಟ-ಗುರಿ.

ಬಾಳನ್ನು ಬೆಳೆಸಬೇಕು, ಬದುಕಿಸಬೇಕು. ಪರಂಪರಾಗತವಾಗಿ ಬಂದ ಸಂಸ್ಕೃತಿಯನ್ನು ಕಾಪಾಡಬೇಕು, ಹೆಚ್ಚಿಸಬೇಕು. ಭಾರತೀಯರು - ಕನ್ನಡಿಗರು ಮನುಷ್ಯರಂತೆ ಬಾಳಬೇಕು. ಈ 'ಉಸಿರಾಡುವ ಹೆಣ'ದ ಪರಿಸ್ಥಿತಿ ಹೋಗಬೇಕು. ಕವಿ ಬಾಳ ಮೊದಲಿಗ, ಅವನ ಹಿರಿಯ ಜೀವನದ ಹೊನ್ನ ನುಡಿಯ ಬೆಳಕಿನಲ್ಲಿ ಜೀವನ ವಿಸ್ತೃತವೂ ಪರಿಪೂರ್ಣವೂ ಆಗಬೇಕು. ನಾಳಿನ - ನವಜಗತ್ತಿನಲ್ಲಿ ಭಾರತ ತನ್ನ ಯೋಗ್ಯ ಸ್ಥಾನವನ್ನು ನಿರ್ದೇಶಿಸಿಕೊಂಡು, ಜಗತ್-ಗುರುವಾಗಿ ಮೆರೆಯಬೇಕು. ಇದು ಪ್ರಗತಿಶೀಲರ ಆದರ್ಶ.

ಈ ಕವಿತಾಸಂಗ್ರಹಕ್ಕೆ ತಮ್ಮ ಕೃತಿಗಳನ್ನು ವಿಶ್ವಾಸದಿಂದ ಕೊಟ್ಟ ಎಲ್ಲಾ ಕವಿಗಳಿಗೂ ನಮ್ಮ ಧನ್ಯವಾದಗಳು. ಗೆ|| ಕುಮಾರ ವೆಂಕಣ್ಣ, ಗೆ|| ಅರ್ಚಕ ವೆಂಕಟೇಶ ಎಲ್ಲ ಬಗೆಯಿಂದಲೂ ನೆರವು ನೀಡಿದ್ದಾರೆ. ಅವರ ಸ್ನೇಹ, ಸೌಹಾರ್ದಗಳಿಂದಲೇ "ರಸಋಷಿ" ರೂಪುಗೊಂಡುದು. ಶ್ರೀ ತರೀಕೆರೆ ಶಿವಲಿಂಗಯ್ಯನವರು ವ್ಯವಹಾರಕ್ಕಿಂತ ಸಾಹಿತ್ಯ ಹಿರಿದೆಂದು ಭಾವಿಸಿ ಪ್ರಕಾಶನದ ಹೊರೆ ಹೊತ್ತಿದ್ದಾರೆ. ಇವರೆಲ್ಲರಿಗೂ ಸಂಪಾದಕ ಋಣಿಯೆಂದು ಹೃತ್ಪೂರ್ವಕವಾಗಿ ಹೇಳಬಯಸುತ್ತಾನೆ.

**"ಅನ್ನಪೂರ್ಣ"**
**ವಿಶ್ವೇಶ್ವರಪುರಂ,**
**ಬೆಂಗಳೂರು** ನಗರ

**ಸಂಪಾದಕ.**

## *ALL-INDIA PROGRESSIVE WRITERS' ASSOCIATION*

---

*General Secretary*

SAJJAD ZAHEER (Bombay)

*Joint Secretaries*

BISHNU DEY (Bengal)

K. A. ABBAS (Bombay)

### *Bangalore Branch*

*President*

A. N. KRISHNA RAO

*Hon. Secretaries*

KUMAR VENKANNA

KRISHNA RAO NADGER

### *Publications of the Bangalore Branch*

1. BHARATHA SAKTHI (Blank Verse Play) Kumar Venkanna
2. NANNANNU NANE KANDE (I saw Myself) A. N. Krishna Rao
3. PRAGATISILA SAHITYA (A Symposium) Ed: A. N Krishna Rao
4. MAXIM GORKI (Commemoration Volume) Ed. A N Krishna Rao
5. THALEHARATE (Light Skits) Krishna Rao Nadger
6. RASA-RISHI (Anthology of Progressive Poetry) Ed: A N Krishna Rao

### *In the Press*

7. HISTORY OF RUSSIAN LITERATURE: T. T. SHARMAN
8. DURANTHA CHITRAGALU (Lives of the Working Class Folk): Archik Venkatesh
9. THAYI MANNU (A Rural Novel): T R. Subba Rao
10. SEENAPPANA COOLIE (Proletarian Novel): Kumar Venkanna
11. LIFE OF MAXIM GORKI: Comrade A. Roskin
12. SMOKE AND DUST (Novel on Factory Life). K. Nagesha Rao

---

*"Annapurna" Visweswarpuram, Bangalore City,*

*SOUTH INDIA*

# ABOUT OURSELVES

The Progressive writers' movement established at Bangalore in November 1943 has faced many detractors and hostile critics who chose to employ gross misrepresentation of progressive idealogy as their missile. Depending on incorrect data and refusing to be convinced our critics have incessantly campaigned against us. But what it is that we stand for? We reproduce two extracts - one from the aims and ideals of the Central organisation and another from a learned contribution by one of Kannada Literary leaders Re-orientation of ideas, evaluation of accepted dogmas, vitalisation of our life through literature has been our aim. The two extracts amply support our idealogy and it is for our critics to open their eyes and see how one of our foremost leaders of thought Prof. B. M. Srikantia had the imagination to visualise the new revolutionary literature that was in the making. "Revolutionise, revitalise and take literature to the people" is the dominant note of Prof. Srikantia and we have put into practice his precept.

Our Critics

The critics want to 'hang the dog giving him a bad name.' They accuse us of being communists. We, writers of Karnataka do not belong to any political party and we refuse to be dragged into the cobwebs of party politics. Much as we admire the Communists, for their sincerity, self—sacrifice and

P. W. A and Communism

resolute patriotism we do not owe any allegiance to them nor do we belong to their or any other political party. Politics and literature are two channels for mass - contact and mass education. Ours is the path of literature and we maintain a live-interest in all political happenings because literature is universal and knows no taboos.

Our attitude towards classicism and tradition is purely rational Much as we admire our age-old tradition we feel they should be re-interpreted to suit modern requirements and to solve new problems Our insular position has undergone revolutionary changes and feudalism, which we so warmly hugged and which was the guiding principle of several of our religious and literary movements in the past, has decayed and crumbled. Our life is being closely hemmed into the lives of millions of our fellow beings throughout the world. A new world-order is being created and we want India to be a willing and prominent partner of that Commonwealth We are not warm about insular and communal literature and we resent literature being exploited to suit the taste of a decadent civilisation It must be maintained in its pristine form and be the spring of life to one and all.

Religious Literature

Religious literature which forms the bulk of our traditional output should also be remoulded. Only such literature as breeds good fellow - feeling, which is catholic, which is not vituperative and which

promotes universal brotherhood will be cherished by us. We should mercilessly remove the morass that has collected on our religious and secular literature and see that the mother plant does not decay or perish.

Past and Present

Trained by tradition our critics look askance at the new upsurge. They feel that we have come to destroy It is true that we have come to destroy filth and garbage and retain all that is beautiful and noble in our country's past But we do not want to hang on to the past. The past cannot be re-established. Our life cannot go back to the Vedas, Koran or the Bible. Mill, Burke, Rousseau, Marx, Sun Yat Sen, Lenin, Nehru have opened new vistas of thought. The new world order requires new contributions in tune with the cultural growth of each country.

The Future

It is a matter of great relief for us to express that these two years of incessant work has brought several leading Kannada intellectuals to see and appreciate our point of view. The President of the Twenty-ninth Kannada Sahitya Sammelan has given the right lead by asking writers to keep in close touch with the P.W.A. We are hopeful that ere-long writers in Karnataka will join us in greater numbers and help us to carve an indelible mark on the history of our times. We enjoin our compatriots to give up narrow - bickering and unite. We have to unite and present a formidable front to the several reactionary forces assiduously

undermining the noble destiny of our country The Imperialist, the Fascist, the hoarder, the profiteer, the reactionary are our enemies and the enemies of the people. Let us fight them and their morbid communalism. Karnataka is torn asunder by its feudal monopolisers and communalists. Our politics has become a farce, our leadership a travesty and our social life an inane futility. The undying Karnataka should live, live as a compeer and it is for us the young to break the bonds of caste tyranny, feudal domination and aggressive capitalism and build a New Karnataka.

Let us recall the message of our beloved poet Rabindranath Tagore

" Come friend, flinch not, step down upon
the hard earth.
Do not gather dreams in the dusk
Storms are brewing in the sky, lightning
flashes are striking at our sleep
Come down to the common life.
The web of illusion is torn take shelter
within walls of rough stones "

Rasa-Rishi

" Rasa Rishi " the present collection, an anthology of Progressive poetry is the sixth of our publications.† Fourteen representative poets have been chosen and more than sixty verses included. Kumar Venkanna, journalist and prolific writer contributes delightful pen pictures

† Our other publications are" Bharathi Sakthi" by Kumar Venkanna; "Nanannu Nane Kande" by A.N. Krishna Rao, 'Pragatisila Sahitya Ed. A. N. Krishna Rao; "Thaleharate" by Nadgir Krishna Rao "Maxim Gorki commemoration Volume" Ed A N. Krishna Rao issued by the Bangalore Branch of the All India progressive writer's Association.

of proletarian life in South Canara. He reveals the poetry in the life of working-class people and the pictureseque existence of hawkers. As a study of types and excursion into folk-music these poems are a distinct contribution. Venkanna, who dedicated his pen to the cause of famine-stricken Bengal also writes on Bengal and Kerala. Bengal's plight has drawn revolutionary poems from V. C. Bhatt, K. Channabasappa, Ananthanarayan and Inchal. Ananthanarayan, one of our able Marxist theoriticians, answers the charges levelled against the Progressives by the anonymous versifier "Kavimitra". He severely criticises the bourgeois mentality and asks Kavimitra and his ilk to close down their ivory towers and come down to the masses. He also contributes a fine tribute to that Great American friend of humanity, Upton Sinclair. Sinclair's ceaseless efforts to draw humanity from the dense Jungle of capitalistic exploitation has been eulogised Tributary poems on Karl Marx, Lenin, Gandhi, Kasthuraba, fourteen makers of modern Kannada Literature have been contributed by Sogal, Archik Venkatesh and Desai Dattamoorthy. Archik has to his credit a fine poem on human suffering brimming with vitality and hope. Human suffering on the social scale has been picturised by Kavyananda who lashes furiously at our die-hard conservatism and ego. Desai Dattamoorthy makes an inroad into folk poetry and models some of his poems on peasant metres. And one could see the poet making spasmodic efforts to shake off

the frustration that engulfs him. Speaking of folk poetry, Jogalekar Panduranga Rao contributes delightful little verses in the peasant three line metre (Thripadi) masterly employed by one of our great poets Sarvajna Sanakal, Channabasappa, Inchal, Kirkee and Patil Putapa, a fine band of progressive writers from Belgaum add their quota of fine poems These poets breathe a fresh vigour into Kannada poetry, a rare service indeed. The present Editor translates for the first time fifty-one verses by Omar Khayayam from his original Rubaiyyats An earlier translation was by Shri D. V. Gundappa, a distinguished poet who based his work on the translations of Fitz-Gerald.

This rich sheaf garnered from various gardens of Karnataka is the first representative poetic anthology in Kannada *. It introduces the work of the younger band of poets and marks a land-mark in the evolution of Kannada radical thought.

**A. N. KRISHNA RAO**

*Editor "Rasa Rishi" and President,*
*All India Progressive Writers' Association*
*(Bangalore Branch)*

---

* For a comprehensive analysis of Kannada Poetry please refer to A. N. Krishna Rao's forth coming book "KANNADA POETRY THEN AND NOW"—A P.W. A. Publication.

## INDIAN PROGRESSIVE WRITERS' ASSOCIATION

Radical changes are taking place in Indian society. The spirit of reaction, however, though moribund and doomed to ultimate decay is still operative and is making desperate efforts to prolong itself

It is the duty of Indian writers to give expression to the changes taking place in Indian life and to assist the spirit of progress in the country.

Indian literature, since the breakdown of Classical culture, has had the fatal tendency to escape from the actualities of life It has tried to find a refuge from reality in spritualism and idealism The result has been that it has become anaemic in body and mind and produced a rigid formalism and a banal and perverse ideology. Witness its mystical-devotional obsession, its furtive and sentimental attitude towards sex, its emotional exhibitionism and its almost total lack of rationality.

It is the object of our Association to rescue literature and other arts from the conservative classes in whose hands they have degenerated so long; to bring the arts into the closest touch with the people; and to make them the vital organs which will register the actualities of life, as well as lead us to the future we envisage.

While claiming to be the inheritors of the best traditions of Indian civilisation, we shall criticise, in all its aspects, the spirit of reaction in our country; and we shall foster through interpretative and creative work, (with both Indian and foreign

resources) everything that will lead our country to the new life for which it is striving. We believe that the new literature of India must deal with the basic problems of our existence today—the problems of hunger and poverty, social backwardness and political subjection,

All that drags us down to passivity, inaction and unreason we reject as reactionary.

All that arouses in us the critical spirit which examine institutions and customs in the light of reason, which helps us to act, to organise ourselves, to tranform, we accept as progressive.

The aims and objects of the Association are as follows :—

(1) To establish organisations of writers to correspond with the various linguistic zones of India ; to co-ordinate these organizations by holding conferences and by publishing literature ; to establish a close connection between the Central and local organisations, and to co-op erate with those literary organisations whose aims do not conflict with the basic aims of the Association.

(2) To produce and to translate literature of a progressive nature and of a high technical efficiency, to fight cultural reaction ; and in this way to further the cause of Indian freedom and social regeneration.

(3) To protect the interests of authors.

(4) To fight for the right of free expression of thought and opinion.

———:———

# TRENDS AND AIMS OF NEW KANNADA LITERATURE

Prof B M. Srikantia in a valuable article on "Kannada Resurgent" to Mysore Census Report Vol. xxiii (1941) writes:

> "Half a century of Kannada resurgent has thrown up trends and aims, which may be summarised up as a sort of writer's creed.
>
> 1. Revolutionise, socialise, humanise.
> 2. Rouse the men, women and children for Kannada in a re-unified Karnataka.
> 3. Publish and study critically the old classics. Broadcast the really good things in them into the future.
> 4. Reorganise the standard language; purify, strengthen and discipline it Make it a fit vehicle for modern and ancient knowledge, and for a new literature of power.
> 5 Absorb world - culture - "the best that has been said and thought and done in the world" - in the great literatures of East and West. Let there be in Karnataka a few specialists in each to bring in light from all quarters.
> 6. With regard to our own Indian heritage, sift the true from the false, the universal from the local and temporary, deepen and refine and popularise it, so that a free, united happy India may come into being and take her place amoung the nations.

7. Establish a living catholic taste. Experiment in freedom. Work out old things and new in a sympathetic imagination, to ennoble and enrich the human spirit. Steep yourself in life and the great masters. Remember "A good book is the precious life-blood of a master spirit"

8. No more meaningless conventions or flourishes for pedants. Write for the people, simply, sincerely, strongly. Give them the truth you see, fearless in the interpretation of life and frank in the faith needed for a life in God - in goodness, truth and beauty. Cultivate the garden of your fathers afresh for the fruits of the reborn spirit."

—:—

# ಪರಿವಿಡಿ

# ರ ಸ ಋ ಷಿ

## ಪ್ರಾರ್ಥನೆ *

ಮನದ ಅಂಜಿಕೆಯು ಹರಿದು
ತಲೆಯು ಎತ್ತರದಿ ನಿಮಿರಿ ಮೆರೆದು
ಜ್ಞಾನಸಿಂಧು ಸ್ವಚ್ಛಂದದಲಿ ಚಲಿಸುವಲ್ಲಿ
ನನ್ನ ನಾಡು ಕಣ್ಣು ತೆರೆಯಲಿ, ಎಚ್ಚರಾಗಲಿ!

ಚಿಕ್ಕ ಪುಟ್ಟ ಮಾತಿಗೂ
ಕನಲಿ ಕವನಹೂಡಿ ಹೋಳು ಹೋಳಾಗಿ
ಸೀಳಿಹೋಗದಂತೆ ಅಮೃತ ಸೃಷ್ಟಿಯಲ್ಲಿ
ನನ್ನ ನಾಡು ಕಣ್ಣು ತೆರೆಯಲಿ ಎಚ್ಚರಾಗಲಿ !

ನಿಜದ ಅಂತರಂಗದಿಂದ
ಮಾತು ಚಿಮ್ಮಿಬಂದು, ಅವಿರತ ಸಾಧನೆ
ಪೂರ್ಣತೆಯೆಡೆಗೆ ತನ್ನ ತೋಳ ಚಾಚಿರುವಲ್ಲಿ
ನನ್ನ ನಾಡು ಕಣ್ಣು ತೆರೆಯಲಿ, ಎಚ್ಚರಾಗಲಿ!

ನಿರ್ಮಲ ವಿಚಾರಗಂಗೆ
ಮೃತರೂಢಿಯ ಒಣ ಮರಳುಗಾಡಿನಲಿ
ತನ್ನ ದಾರಿಯನು ತಪ್ಪಿ ಶೂನ್ಯವಾಗದಲ್ಲಿ
ನನ್ನ ನಾಡು ಕಣ್ಣುತೆರೆಯಲಿ, ಎಚ್ಚರಾಗಲಿ!

ನಿನ್ನ ದಯೆ ಕರುಣೆಯಲಿ
ಮನವು ಅರಳಿ ವಿಕಸಿತವಾಗಿ ನೆಮ್ಮದಿಯ
ಆಚಾರ ವಿಚಾರದಲಿ ನಡೆವಂಥ ಸ್ವರ್ಗದಲಿ
ನನ್ನ ನಾಡು ಕಣ್ಣು ತೆರೆಯಲಿ. ಎಚ್ಚರಾಗಲಿ!

—ಪಾಟೀಲ ಪುಟ್ಟಪ್ಪ.

---

* 'Where the mind is without fear
and the head is held high.'
—ರವೀಂದ್ರನಾಥ ಠಾಕೂರ

# ಆಲದ ಮರ

ಇಪ್ಪತ್ತು ವರ್ಷದಾ ಕತೆಯನರಿತಿಹೆ ನಾನು
ನಾ ನಿನ್ನ ಕಂಡುದೀ ಕಾಲ
ನನತಂದೆ ಹೇಳಿದಾ ಅವನ ಬಾಳನು ನೀನು
ಕಂಡಿರುವೆಯೆಂದು-ಅದು ಜಾಲ !

ನನ ಅಜ್ಜ-ಆಹ ! ಹಲ್ಲಿನ್ನು ಮೂಡದ ಶಿಶು
ಎಲೆ ಜಜ್ಜಿ ಮೆಲ್ಲುತ್ತ ನುಡಿದ
"ನಾನು ಈ ಮರ ಏರಿ ಕೊಂಬೆಗಳ ಕಿತ್ತಾಗ
ನನ ತಂದೆ ಕೆಳಗಿದ್ದು ದುಡಿದ"

ಹಳ್ಳಿಗೌಡನ ಗಣನೆ, ಶಾಸನಗಳೇನಿಲ್ಲ
ನೂರ ಮೇಲ್ಐವತ್ತು ವರುಷ
ಕಂಡೆ ನೀ. ಆದರೂ ಅಳಿವ ಭೀತಿಯದಿಲ್ಲ
ನೀ ನಮ್ಮ ನಗರದಾ ಪುರುಷ

ಎನಿತೊ ಮಕ್ಕಳು ನಿನ್ನ ಹೆಗಲೇರಿ ಬಿದ್ದರೊ
ಅಲ್ಲೆ ಓದನು ಓದಿ ನಲಿದು
ಪಂಡಿತರೊ ಮಾಸ್ತರರೊ ಹಳ್ಳಿಯಾ ಗೌಡರೊ
ನಗರ ನ್ಯಾಯನ ಹಿಡಿದ ಜನರು.

ಸಾಮ್ರಾಜ್ಯದಂತೆ ಹಬ್ಬಿದೆ-ಉಬ್ಬಿ ಬಾಳಿರುವೆ
ಬೀಳ ಬಿಟ್ಟಿಹೆ ನೆಲಕೆ ಮುಟ್ಟೆ
ನಿನ್ನೆ ತೂಗಿದ ಹಗ್ಗ ಇಂದು ನಿನಗಾಧಾರ
ಇದು ರಾಜತಂತ್ರದಾ ಮುಷ್ಟಿ.

# ಕೋಳಿ ಮರೀ

**ಕೋಳೀ....ಕೋಳಿಮರಿ !**
ಕೋಳಿ ಮರಿ ಬೇಕೆ; ಕೋಳಿ ಮರಿ !!

ಜೀವಿಯ ಜೀವಿ ತಿನ್ನುವ ಕಾಲ
ಒಬ್ಬನ ಮಡಿಸುವುದೊಬ್ಬನ ಜಾಲ
ಜೀವಿಯ ಮಾರುವ ಜೀವಿಗಳತುಲ
ಜಗವೇ ಅನ್ಯಾಯದ ಮೂಲ !

ಜನತೆ ಜನತೆಯಾ ಜೀವವ ಹಿಂಡಿ
ಧನ ಕೂಡಿಸಿ, ಸಂಸಾರದ ಬಂಡಿ
ಹಾರಿಸಿ, ಓಡಿಸಿ, ಸಾಗುತಲಿರಲು
ಎಲ್ಲಿದೆ ಜೀವದ ಸ್ವಾತಂತ್ರ್ಯ ?

ದೇವನಿರುವನೇ - ಇದ್ದರೆ ಎಲ್ಲಿ ?
ಪ್ರಾಣಿಕೋಟಿಗಳ ಮಾರುವನೆಲ್ಲಿ ?
ಇಲ್ಲದಿರೇಕೀ ನೀತಿಯದಿಲ್ಲಿ ?
ಬೇಕಿಲ್ಲವೆ ಇದಕಿನ್ನು ಕೊನೆ ?

**ಕೋಳಿ** ಮರಿಗಳಿವೆ ಬಾತುಗಳಿಲ್ಲಿವೆ
**ಕಡಿಮೆ** ದರವು ನೀವ್ ಕೊಳ್ಳುವುದಿಲ್ಲವೆ ?
**ಕೋಳಿ** ತನ್ನ ರುಚಿ – ನೀವರಿತಿಲ್ಲವೆ ?
ಬನ್ನಿರಿ ಕೊಳ್ಳಿರಿ ಕೋಳಿಮರಿ.

——:——

# ಕುಂಕುಮ

ಕುಂಕುಮ ಬೇಕಮ್ಮಾ - ಕುಂಕುಮ
ಕುಂಕುಮ ಬೇಕಮ್ಮಾ ? || ಪ ||
ಕೊಳ್ಳಿರಮ್ಮಾ ತಡಮಾಡದಲೆ || ಅ. ಪ ||

ಮುತ್ತೈದೇತನ, ಗರತಿಯ ಕುರುಹನು
ಬಾಳ್ವೆಯ ಬೆಳಕನು–ಕತ್ತಲೆಗಳನು
ಭಾಗ್ಯವತಿಯೆ ವಿರಹಿಯೆ ಎಂಬುದನು
ಲೋಕಕೆ ತೋರುವ ಮಾಂಗಲ್ಯವನು–

ನೀಲಾಕಾಶಕೆ ಚಂದ್ರನೆ ಚಂದ
ಲಲನೆ ಲಲಾಟಕೆ ಕುಂಕುಮ ಅಂದ
ಸಿರಿತನ ಬಡತನ ಯಾವುದೆ ಇದ್ದರು
ಮಾನಿನಿ ಮಾನ್ಯತೆ ಬೆಳಗುವ ಸೊಡರು

---

# ಕಲಾಯಿ

ಕಲಾಯೀ ........
　　ಪಾತ್ರೆ ಕಲಾಯಿ........||

ಭಸ್ಮವಿರದ ಶಿವಭಕ್ತನಿಲ್ಲ
ಭಸ್ಮವಿರದ ನವತರುಣಿಯಿಲ್ಲ
ಭಸ್ಮವಿರದ ಪಂಡಿತ ಬದುಕಿಲ್ಲ
ಭಸ್ಮ—ಭಸ್ಮ—ಭಸ್ಮ.

ರಸ ವಿಷವಾಗುವುದಂತೆ ಅದನು
ಕಲಾಯಿ ಇಲ್ಲದ ಪಾತ್ರೆಯಲಿರಿಸೆ
ಪಾತ್ರ—ಅಪಾತ್ರ ಕಲಾಯಿ ನಶಿಸೆ
ಕಲಾಯಿ—ಕಲಾಯಿ—ಕಲಾಯಿ.

ಕುಂಟು ಕಾಲಿಗೆ ಬೂಟು ಕಲಾಯಿ
ಕುರೂಪಿ ಹೆಣ್ಣಿಗೆ ಸೀರೆ ಕಲಾಯಿ
ಕಟುಕನನುಳಿಸೆ ಖಾದಿ ಕಲಾಯಿ
ಸತ್ಯ—ಮಿಥ್ಯ—ನಿತ್ಯ.

ಜಾತಿ ಕಲಾಯಿ ಅನೀತಿಯ ಜಗಕೆ
ಧನವು ಕಲಾಯಿ ಪಶುನೀತಿಯ ಜನಕೆ
ಪಾತ್ರೆ ಕೊಡಿರಿ ಹೊಸತಾಗಿಸಿ ಕೊಡುವೆ
ಕರ್ಮ-ಮರ್ಮ-ಧರ್ಮ.

---

# ಬೂಟು ಪಾಲೀಶ್

ಬೂಟು ಪಾಲೀಶಾ ಬಾಬು ಬೂಟು ಪಾಲೀಶಾ—
ಜೀತಕಾಗಿ ಈ ಜೀವಿ ಬಂದಿದೆ ಜೀವನ ಸಾಗಿಸೆ ಬಾಬೂ ||

ಹೃದಯವಿರದ ಜನ ತುಂಬಿದೆ ಜಗದಿ
ಉದಯವಿಲ್ಲ ಇನ್ನೂ ನನ ಮನದಿ
ಬಾಳ ಬೆಳಗೆ ದುಡಿವೆನು ದಿನದಿನದಿ

ಏನು ಚಂದ ಈ ಪಾದ - ದೇವರು !
ಕಂಡಿಲ್ಲವು ಇದೂ ಎಂದಿಗು ಬೆವರು
ತುಂಬಿದೆ ಸಾಗರ ನನ ಕಣ್ಣೀರು !

ಬೇಗಿದೆ ಉಡಿಗೆ ಬೆಳೆದಿದೆ ಚೀಲ
ಉಡುಗಿದೆ ಒಳಗೆ ಕತ್ತಲ ಜಾಲ
ಬೆಳಗುವೆ ಬೂಟು—ನೀಡಿರಿ ಕಾಲ !

ತಂಗಿ ತಂಗಿದಳು ತಾಯ ಮಡಿಲಲಿ
ತಂಗಿ ನಿಂತೆನೀ ಜಗದ ಕಡಲಲಿ
ತಂಗಿ ಕೊಳ್ಳಿ ನನ, ಬಾಳು ಬೆಳಗಲಿ.

ಸಾಸಿರ ಪಾದ-ಮಸ್ತಕ ಕಂಡೆ
ಬಂಧುಭಾವ ಹಿರಿತನಗಳ ಬಂಡೆ
ಜೀತದಲ್ಲಿ ನಾ ಎಲ್ಲವ ಕಂಡೆ.

ಬಿಳಿಯದು ಮೆಟ್ಟಿತು, ಕಂದು ಕುಟ್ಟಿತು
ಬಂಧುವೆನ್ನಲದು ಲತ್ತೆ ಕೊಟ್ಟಿತು
ಸಂಕಲೆಯಳಿಯದೆ ದೇಶ ಕೆಟ್ಟಿತು

ದುಡಿವನ ಕೈ ಮನ ತನು ಬಂಗಾರ
ಅವನ ದುಡಿತ ದೇಶದ ಸಿಂಗಾರ
ಬೂಟ ಬೆಳಗುವೆ ಅದು ಶೃಂಗಾರ

——:——

# ಜಂಬಿಲೀ

ಜಂಬಿಲೀೀೀ
ಜಂಬಿಲೀ ಬೇಕೇ ಜಂಬಿಲೀೀೀ.... ||

ಈ ನಗರದಲಿ
ನಿಮ್ಮವರಿಂದಲಿ
ರಚಿತವು ; ಸಾಮಗ್ರಿಗಳನು ತುಂಬಿ
ತಂದಿಹೆಸಿವರಾ ಚೆಲುವೇನೆಂಬೆ
ಜಂಬಿಲಿಗಳಲಿದು ಹಿರಿದರಸು !

ನೀವ್ ಬೆಲೆವೆಗ್ಗಳ
ಸಾಮಗ್ರಿಗಳ
ಕೊಳ್ಳಲವುಗಳನು ಜತನದೆ ತುಂಬಲು
ಪಾತ್ರೆ ಇರದಿರೆ ಇಹುದೆ ಹುರುಳು ?
ದೇಹವಿರದಿರೆ ಆತ್ಮಕಿಹುದೆ ಎಡೆ ?

ದೇಹವಿಲ್ಲದೆ
ಆತ್ಮವದೆಲ್ಲಿದೆ
ಜಂಬಿಲಿ ಇರೆ ಸಾಮಗ್ರಿಯ ರಕ್ಷಣೆ
ದೇಹ ಬಲಿತು ಇರೆ ಆತ್ಮದ ಘರ್ಷಣೆ
ದೇಹಕು ಜಂಬಿಲಿಗೂ ಸಮತೆ !

ಪ್ರಾಣಪಕ್ಷಿಯು
ಹಾರಲು ದೇಹವು
ಬೆಲೆಯಿಲ್ಲದ ಜಂಬಿಲಿ. ನನ್ನದಿದು
ಸಾಮಗ್ರಿಯು ಮುಗಿದರು ಮುಗಿಯದುದು.
ದೇಹಕಿಂತ ಮೇಲಿನದೀ ಜಂಬಿಲಿ.

ಪೋಲಿಸೆ ಜಂಬಿಲಿ
ದೇಹಕೆ ; ಕನಲಿ
ಸಿಟ್ಟಾಗದೆ ಇರಿ : ದೇಹಗಳೆಲ್ಲಾ
ಒಂದೇ ತೆರ ಮಾನವರೊಳಗೆಲ್ಲಾ
ಧನಿಕ-ಬಡವ ಭಾವನೆ ಬೇಕಿಲ್ಲ.

—:—

---

* ಓಲೆಗರಿಯ ಚಾಪೆಯಿಂದ ತಯಾರಿಸಿದ ಬುಟ್ಟಿ.

# ಬಳೆಗಾರನು ಬಂದ

ಬಳೆಗಾರನು ಬಂದ - ಬೀದಿಲಿ
ಬಳೆಗಾರನು ಬಂದ ||

ಬಳೆ ಬೇಕೇ ಬಳೆ-ತರೆಹವಾರಿ ಬಳೆ
ಬಳೆಗಾರನು ಬಂದ
ಹೊರುತಲಿ ತರತರ ಹೊಳೆವ ಗಾಜುಬಳೆ || ಬಳೆ... ||

ತನ್ನದೆ ಆದ ಜಾಣ್ಮೆಗಳಿಂದ
ಕುಪ್ಪಿಯ ಚೂರು-ಗಾಜುಗಳಿಂದ
ಬಳೆಗಳ ಮಾಡಿ ಬುಟ್ಟಿಯಲಿಟ್ಟು
ಹೊರುತಲಿ ಹೆಗಲಲಿ-ತಲೆಮೇಲಿಟ್ಟು

ಬಳೆಗಳ ಮಿಂಚನು ಚೆಲುವನು ಕಂಡು
ಹೊಗುತಿರೆ ಬೀದಲಿ ಬಳೆಗಳ ಗಂಡು
ಸ್ತ್ರೀಯರು ಕಣ್ಣನ್ನರಳಿಸಿ ಕಂಡು
ನಿಲ್ಲಲು-ನಿಲುವುದು ಮಕ್ಕಳ ದಂಡು

ಲಂಗವತೊಟ್ಟ, ಐದರ ಬಾಲ
ಅಂಗಿತೊಡದ ಹಸುಕೂಸು-ಕಮಲೆ
ಬಾಗಿದ ಬೆನ್ನಿನ ಅಡುಗೂಲಜ್ಜಿ
ಇಣುಕುವಳೊವ್ಮ್ಮೆ ಎಲೆಯನು ಜಜ್ಜಿ

ಮಕ್ಕಳು - 'ಬಳೆಗಾರನು ಬಂದವ್ಮ'
ಎನ್ನಲು ತಾಯಿ 'ಛೂ—ಅವ ಗುಮ್ಮ'
ಎನ್ನುವ ಕೆಲರು - ಬರಲೆಂಬವರು
ಸ್ತ್ರೀಯರ ಸೊಬಗೆ ಅವನುಣಿಸು.

ಮಕ್ಕಳು ಮರಿಗಳು ಎಲ್ಲರು ನೋಡೆ
ತಾಯೊಬ್ಬಳು ಮುಂದಕೆ ಕೈ ನೀಡೆ
ಮೃದು ಎಳೆ ಕೈಯನು ಮೆಲ್ಲನೆ ಒತ್ತಿ
ಬಳೆ ತೊಡಿಸುವನವ ಜಾಣ್ಮೆಯಲಿ !

# ಆರೆಂಜ್-ಬೊಂಬ್ಯಾ ದ್ರಾಕ್ಷಿ

ಆರೆಂಜ್-ಬೊಂಬ್ಯಾ ದ್ರಾಕ್ಷಿ
ಬೇಕೆನಣ್ಣ-ತಂದಿಹೆನಣ್ಣಾ

ಹಣ್ಣ ತಿಂದವನು
ಹೆಣ್ಣ ತಂದವನು
ಮಣ್ಣ ಕೊಂಡವನು
ಬಲ್ಲನು ಬೆಲೆಯ.

ಮಡಿಕೇರಿಯದಿದು
ಬೊಂಬಾಯಿಯದಿದು
ಇಂದೇ ಬಂದಿದೆ
ನಿಮಗಾಗಿಲ್ಲಿದೆ.

ಧನಿಕರಿಗಿಹುದದು
ನಮಗೇತಕೆ ಅದು
ಎನ್ನುವಿರೇತಕೆ ?
ಹಣ್ಣಿದೆ-ಜನಕೆ !

ಹಣ್ಣಿನ ರುಚಿಗಳು
ಜನರ ಹೃದಯಗಳು
ಎರಡೂ ಒಂದೇ
ಒಳಗಡೆ ಬೇರೆ !

——:——

# ಬೆಕ್ಕು

( ಲಾವಣಿ )

ಬೆಕ್ಕಿನ ಕೊಂದವರ‍್ಯಾರಣ್ಣಾ
ಬೆಕ್ಕಿನ ಕೊಂದವರ‍್ಯಾರು? ಪ.

ಹಾಸಿಗೆ ಮೇಲೆ ಮಲಗುವ ಬೆಕ್ಕು,
ಪೇಟಿ, ಪೇಟಿಗಳಂ ತಿರುಗುವ ಬೆಕ್ಕು,
ಹಾಲು ಅನ್ನಗಳ ಉಣ್ಣುವ ಬೆಕ್ಕು,
ಕದಿಯದೆ, ಕೊಟ್ಟರೆ ತಿನ್ನುವ ಬೆಕ್ಕು ೧.

ಅಂಗ್ಳ ಮೇಲೆ ಆಡುವ ಬೆಕ್ಕು,
ಮುಂಗ್ಳೆ ಮೇಲೆ ಕುಣಿಯುವ ಬೆಕ್ಕು,
ಇಲಿಗಳ ಹಿಡಿದು ಕುಣಿಸುವ ಬೆಕ್ಕು
ನಮ್ಮೆಲ್ಲರನೂ ಪ್ರೀತಿಪ ಬೆಕ್ಕು ೨.

ಕಪ್ಪಿನ ಬೊಟ್ಟು, ಬಿಳಿ-ಬಿಳಿ ಬಣ್ಣ,
ವಜ್ರದ ಕಲ್ಲನು ಹೋಲುವ ಕಣ್ಣು,
ಬುದ್ಧಿಯು ನಮಗಿಂತಲು ಹೆಚ್ಚಣ್ಣ,
ಹೋಯಿತೆ ನಮ್ಮಯ ಊರಿನ ಕಣ್ಣು? ೩.

ಮುಂಜಾವಿನಲಿ ಮುಖವನು ತಿಕ್ಕುವ
ಪಾಠವ ಮಕ್ಕಳಿಗರುಹುವ ಬೆಕ್ಕು,
ಶುಚಿಯಾಗಿದ್ದು, ಶುಚಿಯಲ್ಲಿರುವ
ರೀತಿಯ ತಿಳಿಸುವ ನಿರ್ಮಲ ಬೆಕ್ಕು ೪.

ನಮ್ಮೆಲ್ಲರ ಪ್ರೀತಿಯ, ಮುದ್ದಾಟದ,
ಜಾಣ್ಮೆಯ, ಚೆಲುವಾಗಿಹ ಕಿರಿ ಬೆಕ್ಕು.
ಎಲ್ಲಿದೆ ತಿಳಿಸಿರಿ, ತಿಳಿಸಿರಿ ತಿಳಿದುದ,
ಹೋದುದೇನು? ಹಾ! ಎಂತಹ ಬೆಕ್ಕು? ೫.

——:——

# ಪೇರಿ ಬ್ಯಾರಿ *

ಕೊಳ್ಳಲು ಬಂದಿಹೆ ! ಇದೆಯೇ ಹೇಳಿ–
ಬಾಟ್ಲೀ ಹಳೆ ಸಾಮಾನ್ ‖

ಹಾಳಾಗಿದೆ ಉಪಯೋಗವೆ ಇಲ್ಲ
ಇನ್ನೇತಕೆ ಇದು ? ಹೋಗಲಿ ಎಲ್ಲ
ಎನ್ನುತೆ ಹಳೆಹಳೆ
ವಸ್ತು ವಡವೆಗಳ
ಒಗೆಯುವಿರೇಕೆ ? ಕೊಳ್ಳುವೆನಲ್ಲ ! ೧.

ಬಟ್ಟೆ, ಪಾತ್ರೆ, ಕಾಗದ, ಪುಸ್ತಕವು
ಬಾಲ್ದಿ, ಬಾಟ್ಲಿ, ಬಾಣಲೆ, ಹಳೆಗುಡ್ಡಲಿ
ದೀಪ, ಡಬ್ಬಿಗಳು
ಚಾಪೆ, ಹಾಸುಗಳು
ಹಳೆ ವಸ್ತುಗಳವು ಏನೇ ಇರಲಿ ! ೨.

ಹಳೆಯದ ಕೊಂಡು ಹೊಸದು ಮಾಡುವೆ,
ಬೇಕಾದವರಿಗೆ ಅವುಗಳ ಮಾರುವೆ,
ಕೊಂಡುದ ಮಾರಿ
ಕೊಳ್ಳಲು ಸಾರಿ
ಎಲ್ಲರು ಒಡವೆಯ ಪಡೆವಂತೆಸೆವೆ ೩.

ದೇವರು ಹಳೆ ದೇಹಗಳನು ಕೊಳ್ಳುವ
ಹೊಸತಾಗಿಸಿ ಹಿಂದಕೆ ತಾ ಕಳುಹುವ
ನನ್ನಂತೆಯೆ ಹರಿ
ಪೇರೀ ಬ್ಯಾರಿ
ತಿಳಿದಿದಕೊಳ್ಳಿರಿ ನನ್ನಯ ಸೇವೆ. ೪.

---

*ಬಾಟ್ಲೀ–ಪೇಪರ್ ಕೊಳ್ಳುವವನಿಗೆ ಒಂದು ಹೆಸರು.

# ಒಂದೂವರೆ ಆಣೆ

ಒಂದೂವರೆ ಆಣೆ—
ಬೇಕಾದುದನು ಕೊಳ್ಳಿರಿ ಬನ್ನಿ
ಒಂದೂವರೆ ಆಣೆ !

ಯಾವುದು ಬೇಕಿದ್ದರು ಬೆಲೆ ಒಂದೇ
ಹತ್ತಾರಿಲ್ಲವು, ಮಾತೂ ಒಂದೇ
ದೊಡ್ಡದು, ಚಿಕ್ಕದು, ಹಾಳು, ಒಳ್ಳೆಯದು
ಎನ್ನುವ ಭೇದವೆ ಎಮ್ಮೊಳಗಿಲ್ಲವು—

ಜೀವಕೋಟಿಗಳು ದೇವನ ದೃಷ್ಟಿಗೆ
ಒಂದೇ ಬೆಲೆಯವು, ನಮ್ಮಯ ದೃಷ್ಟಿಗೆ
ವಸ್ತುಗಳೆಲ್ಲವು ಒಂದೆ ಬೆಲೆಯವು
ದೇವನ ನೀತಿಯ ಅನುಸರಿಸುವೆವು

ಭಟ್ಟರೆ, ಸೆಟ್ಟರೆ, ಸ್ವಾಬರೆ, ಪೈಗಳೆ
ಪ್ರಭುಗಳೆ, ಗೌಡರೆ, ರಾಯರೆ, ರೈಗಳೆ
ಬನ್ನಿರಿ ಬೇಕಿಹುದೆಲ್ಲವ ಕೊಳ್ಳಿರಿ,
ಒಂದೇ ಬೆಲೆಯು ಮಾಡೆನು ರಗಳೆ

ಧನಿಕ, ಬಡವ, ಬಲಯುತ, ಬಲಹೀನ
ಬಾಲಕ, ವೃದ , ಸ್ತ್ರೀಪುರುಷರುಗಳು
ದೇವಗೆ ಎಲ್ಲ ಸಮಬೆಲೆಯವುಗಳು
ನಮಗೀ ವಸ್ತುಗಳೆಲ್ಲ ಸಮಾನ

ಹುಟ್ಟು, ಬಾಳ್ವೆ, ಐಶ್ವರ್ಯವ ನೋಡಿ
ಬೆಲೆ ಕಟ್ಟನು ದೇವನು, ಬದಲಾಗಿ
ಜನತಾ ಉಪಕಾರವನೇ ನೋಡುವ
ನಮ್ಮಂತೆಯೆ - ನಾವಿಬ್ಬರು ಜೋಡಿ.

---

# ತೆಂಗಿನಕಾಯಿ

[ ಇಂದಿಲ್ಲ ಸ್ವಾಮಿ ಮುಂದಿಲ್ಲ... ಎಂಬಂತೆ ]

ತೆಂಗಿನಕಾಯಿ ತೆಗೆಯಲಿಕುಂಟೇ–
ತೆಂಗಿನಕಾಯೀ ‖ ಪ ‖

ತೆಗೆಯಲೆ ? ಬರಲೆ ? ಬೆಳೆನುದು ಉಂಟೆ–
ತೆಂಗಿನಕಾಯೀ ‖ ಅ. ಪ ‖

ತೆಂಗಿನಕಾಯಿಗಳೆಷ್ಟೋ ಇರಲಿ
ಮರಗಳು ಎಲ್ಲೂ, ಹೇಗೂ ಇರಲಿ
ಬಾಗಿದ್ದರು - ಅವು
ನೇರಾಗಿದ್ದರು
ಬೆಳೆದು ಮಾಗಿ ಒಣಗಿದೊಡನೆ ತೆಗೆವೆ–

ಮಾಡಿನ ಮೇಲೆ, ಮಕ್ಕಳ ತಲೆಗೆ
ಬೀಳಲು ಬಹುದು ಎಲೆಕಾಯಿಗಳು
ಇದೆ ತೊಂದರೆ - ಅದ
ನೀಗುವೆನೆಂದರೆ
ನಿಮಗೇತಕೆ ಬೇಕಿಲ್ಲವೊ ಕಾಣೆ–

ಬಡವರೆ ಧನಿಕರೆ ಯಾರೇ ಇರಲಿ
ಮರ ಒಂದಕೆ ಕಾಲಾಣೆಯ ಕೊಡಲಿ
ಗೈವೆನಲ್ಲ - ನಾ
ಕೆಲಸವನೆಲ್ಲ
ಸಂದೇಹವದೇತಕೆ ? ಇನ್ನೇನು ?

---

# ಕೊಡ ತೆಗೆಯಲಿಕುಂಟೇ

ಕೊಡ ತೆಗೆಯಲಿಕುಂಟೇ - ಬಾವಿಯ
ಕೊಡ ತೆಗೆಯಲಿಕುಂಟೇ ?

ಕೊಟ್ಟದು ತನಗೆ, ಬಚ್ಚಿಟ್ಟದು ಪರರಿಗೆ
ಎನ್ನುವ ಗಾದೆಯ ಕೇಳಿ,
ಬಾವಿಯಲಿದ್ದುದ ತೆಗೆಯಲೆ ಹೊರಗೆ,
ಬರಬೇಕೇ ಅದ ಹೇಳಿ

ಕಾಸುಕೊಟ್ಟು ಹೊಳೆ ಈಸುವದೇತಕೆ
ಇದ್ದುದ ಹೂಳಿಡಲೇಕೆ ?
ಉಪಯೋಗಕೆ ಇರದಿಹ ಕೊಡವೇಕೆ ?
ಬರಲೇ ಹೇಳಿ ತೆಗೆಯಲಿಕೆ ?

ಬಾವಿಯು ಆಳಕೆ ಹೆದರುವನಲ್ಲ
ಕೊಡವೆಷ್ಟಿದ್ದರು ಬೇಸರಿಸೆ.
ಕೊಡವೊಂದಕೆ ನಾಲ್ಕಾಣೆಯೆ ಎಲ್ಲ
ಸಾಕು ಸಾಸಕೆ ; ಬೇಸರಿಸೆ.

ಗೇಣುದ್ದದ ಹೊಟ್ಟೆಗೆ ಬೇಕಾಗಿಯೆ
ನಂಬಿದ ಸಂಸಾರಕ್ಕಾಗಿ,
ಜೀವದ ಹಂಗನೆ ತೊರೆದು ಗೇಯುವೆ
ಸಾವಕೆಣಕಿ ಜೀವನಕಾಗಿ.

——:——

# ರೈತ ಹೆಣ್ಣು *

ಓ ಬಾ....ಲೆ—
ಓ ಬಾಲೆ ಬಾ ಮುಂದೆ ಸುಗ್ಗಿಯ ಬೆಳೆಸೋಣ
ಓ ಬಾ....ಲೆ !

ಅನ್ನವಿರದೆ ಜನ ನರಳುತಲಿರುವರು
ಓ ಬಾಲೆ
ಬೆಳೆಸೋಣ ಉಳಿಸೋಣ ಅಕ್ಕತಮ್ಮಂದಿಃ
ಓ ಬಾಲೆ.

ಓಬವ್ವೆ ಹಸಿದಾಳು ಹೇಗನ್ನ ತಂದಾಳು
ಓ ಬಾಲೆ
ಮೂಗುತಿ ಮಾರಿ ಅನ್ನವ ತಂದು ತಿಂದಾಳು
ಓ ಬಾಲೆ

ಮಾದಯ್ಯ ಸಂಸಾರ ಸಲಹದೆ ಸತ್ತನು
ಓ ಬಾಲೆ
ಹೆಂಡತಿ ಮಕ್ಕಳ ಕೊಳದಲ್ಲಿ ದೂಡಿದ
ಓ ಬಾಲೆ.

ಬಸಿರಾಕೆ ನಂಜಮ್ಮ ಹಸಿದು ಮೂರ್ಛೆಯ ಬೀಳ
ಓ ಬಾಲೆ
ತಲೆ ಒಡೆದು ಸತ್ತಾಳು, ನಮ್ಮನ್ನು ಬಿಟ್ಟಾಳು
ಓ ಬಾಲೆ.

ಹಸುಗೂಸು ತಿಮ್ಮಣ್ಣ-ಮರಿಮಗು ನೀಲಕ್ಕ
ಓ ಬಾಲೆ
ಹಸಿವಿನ ರೋಗಕ್ಕೆ ತುತ್ತಾಗಿ ಮಡಿದರು
ಓ ಬಾಲೆ.

ದೊಡ್ಡಮ್ಮ ಚಿಕ್ಕಮ್ಮ ಅಕ್ಕತಂಗಿಯರೆಲ್ಲ
ಓ ಬಾಲೆ
ಬಂಧು ಬಳಗ ಅಳಿಯೆ ನಮ್ಮ ಬಾಳೇಕಮ್ಮ
ಓ ಬಾಲೆ.

ಊಳೋಣ, ಬಿತ್ತೋಣ, ಬೆಳೆಸೋಣ, ಕುಯ್ಯೋಣ
ಓ ಬಾಲೆ
ಅಕ್ಕಿ-ರಾಗಿ-ದವಸ ಬೆಳೆಸೋಣ, ಉಳಿಸೋಣ
ಓ ಬಾಲೆ.

ಜನವಿರೆ ದೇಶ-ದೇಶವದಿರೆ ನಾವೆಲ್ಲ
ಓ ಬಾಲೆ
ಹಗಲಿರುಳು ದುಡಿಯೋಣ ಉಳಿಯೋಣ
ಓ ಬಾಲೆ. [ನಾವೆಲ್ಲ

——:——

* ಮಂಗಳೂರು ಕಡೆಯ ತುಳು ಪಾಡ್ದನದ ರಾಗ-ದಾಟಿಗಳಲ್ಲಿ. ಹಾಡಿನಲ್ಲಿ ಮೊದಲ ಎರಡು ಚರಣವನ್ನು ಒಂದು ಗುಂಪೂ ಇನ್ನೆರಡನ್ನು ಮತ್ತೊಂದು ಗುಂಪೂ ಹಾಡಿಕೊಂಡು ಅಗೆ ನೆಡುತ್ತಾರೆ.

# ದೋಣಿಯಾಳು

ಜಗದ ಜನತೆಗೆ ದಾರಿ ತೋರುತಿಹೆ ಜೀವನದಿ
ಹೋರಾಟವೇ ಅಂದ ಆನಂದವೆಂದು ॥ ಪ ॥

ದಾರಿ ತೋರುವೆ ಜನಕೆ ನದಿಯ ಹಾಯಿಸುತಲಿ
ನೆರೆ, ಗಾಳಿ, ಮಳೆಗಳಿದ್ದರು ನಿನಗೆ ಒಂದೆ.
ಮುಂಜಾನೆ ಮನೆಯುಳಿದು ಮರಳುವೆ ಸಂಜೆಯಲಿ
ದಿನ ದಿನವು ನಿನ್ನ ಈ ಹಾಡದೊಂದೆ.

ಹೊಯ್ಲು ಸುಯ್ಲುಗಳನು ಇದಿರಿಸಿ ಮುಂದೊತ್ತಿ
ತೊಡಕ ಹಿತವಾಗಿ ಮಾರ್ಪಡಿಸಿಕೊಂಡು;
ಪ್ರಕೃತಿಯೊತ್ತಡ ಸೋತಿತೇನು ನಿನ್ನನ್ನೊತ್ತಿ
ನಡುಗದವರಾರು ನಿನ್ನಯ ಸಾನಕಂಡು ?

ನಿನ್ನ ಮುಂದಿನ್ನಾವ ಗೀತೆ ನೀತಿಗಳಯ್ಯ
ಕರ್ತವ್ಯವರುಹುತಿರು ಸತ್ಕರ್ಮ - ಯೋಗಿ.
ಜನಕೆ ಜ್ಞಾನದ ಬೆಳಕ ನಿಚ್ಚ ಈಯುತಿರಯ್ಯ
ರವಿಶಶಿಗಳಿರುವನಕ; ಕರ್ಮಯೋಗಿ.

---

# ನಾಗನ ಕಲ್ಲು

ಧನವ ಮದವೇರಿ ಮೆರೆಯುವ ಧನಿಕ ಜೀವನದಿ
ರಕ್ಕಸನ ರೂಪವನು ತಾಳುವಂತೆ.
ಧರ್ಮ ಮದವೇರಿ ನಿಂದಿಹ ಅಂಧ ಧಾರ್ಮಿಕನು
ಧರ್ಮದ ಮದಿರೆಯಿಂದ ಮೆರೆಯುವಂತೆ !

ವರುಷಕ್ಕೆ ಹತ್ತಾರು ಬಾರಿ ಹಾಲನು ಕುಡಿದ
ಈ ಕಲ್ಲು ಕಪ್ಪನೇ ಮಿರುತಿಹುದು
ಯಾವ ಪುರುಷಾರ್ಥಕ್ಕೆ ಕಲ್ಲ ಹಾವೆಂಬರೋ
ಹಾಲ ಜಳಕವದಂತು ಸಾಗುತಿಹುದು.

ಕೊಚ್ಚೆಯಲ್ಲಿದ್ದರೆ ಕಲ್ಲಾಯ್ತು ಕಟ್ಟೆಗೆ
ಬಚ್ಚಲಲ್ಲಿರೆ ಬಟ್ಟೆ ಒಗೆಯಲಾಯ್ತು
ಹಿತ್ತಿಲಲಿ ನಿಂತಾಗ ಗುರುತು ಕಲ್ಲಾಯಿತ್ತು
ಅರಳಿಕಟ್ಟೆಯನೇರೆ ಅರಸಾಯಿತು.

ಬ್ರಹ್ಮಸೃಷ್ಟಿಯ ಮಿರಿ ಸೃಷ್ಟಿಗೈಯುವ ಭಟರು
ಮಾನವರು ಮಾನ್ಯರಹರೆಂಬ ಹೆಮ್ಮೆ
ನಮ್ಮದಿದೆ ; ಆವರೂ ಮಿಗಪಕ್ಕಿ ನರಿನಾಯು
ಶೌಚ ತೊಳೆಯುವ ಕಾರ್ಯ ಎಮ್ಮಗೈಮೆ.

ಸತ್ತವರು ಸತ್ತಿಹರು, ಇದ್ದವರು ಉಳಿದಿಲ್ಲ,
ಸತ್ತವರಿಗಳುತ ಸಾಯುತ್ತಲಿಹರು,
ಬೆಲೆಯಿಲ್ಲದುಳಿದಿಹವು ಜೀವಕೋಟಿಗಳೆಲ್ಲ ;
ಇದ್ದವರಿಗತ್ತಾಗ ಬದುಕಲಿಹರು !

---

# ಗಾರ್ದಬಾ

ಆಹ! ಶಾಂತಿ ಅಹಿಂಸೆಯಾಂತ ಕಾರಣಪುರುಷ
ಷಡ್ಗುಣಗಳನ್ನಾಂತ ಜಗದೇಕ ಜೀವಿ!
ತ್ಯಾಗವೆಂಬುದೆ ನಿನ್ನ ಗುಣಗಳೊಡಸಿಹ ಪರುಷ
ಸನ್ಯಾಸಿ—ನಿನ್ನದೇತಕೆ ಬಣ್ಣ ಕಾವಿ?

ಬೊಮ್ಮ ಮಾಡಿದ ಪ್ರತುಮೆಯೆಲ್ಲ ಜೀವಿಗಳೆಂಬ,
ಎಲ್ಲರೂ ಸೋದರರು ಜಗದೊಳೆಂದು,
ಎಲ್ಲವೂ ಎಲ್ಲರದು ಸ್ವಾರ್ಥಕೆಡೆಯಿಲ್ಲೆಂಬ,
ಮಾನವನ ಧರ್ಮವನು ಸಾರುತಿಹೆ ಇಂದು!

ಜೀವನದ ಎಡರುತೊಡರುಗಳೆಷ್ಟು ಮುಂಬಂದು
ಪೀಡೆಯನ್ನಿತ್ತರೂ, ಮಂದಿ ನೇಹವನುಳಿದು
ಹಿಂಸೆಗಳಸುರಿದರೂ, ನೀನು ಶಾಂತಿಯನುಳಿದು
ವರ್ತಿಸಿದುದನು ಕಾಣೆ, ಕೆಲವೊಮ್ಮೆ ಮುನಿಸೊಂದು
ತಪಸಿಗಳ ಸಿಡುಕಂತೆ ಲತ್ತೆ ಇತ್ತಿರಬಹುದು
ಆದರದು ಹುಲು—ಚಂದ್ರನಾ ಕಲೆಯ ತೆರನಂತೆ!

———:———

# ಲೇ ಲೇ ಲೆ *

ಲೇ ಲೇ ಲೆ ಲೇ ಲೆ ಲೆ ಲೋ
ಲೇ ಲೆ – ಲೆ ಲೆ ಲೆ ಲೋ —

ಮೈಂದ, ಮುದರ, ಮುತ್ತ, ಬೋರ,
ಕುಕ್ಕ, ಕರಿಯ, ಕಾಳ, ಬೊಳಿಯ—
ಐತೆ, ಮ್ಯಾಲು, ಕೊರಪ್ಪೋಳು,
ಚಂದು, ತಂಕ್ರು, ಗುಳ್ಳಿ, ಚೀಂಕ್ರು—
ಕುಟ್ಟಿ ಕುರ್ಲೆ
ಗಳನು ತನ್ನಿ!
ಲೇಲೆ ಹಾಕಿ ಕುಣಿವ ಬನ್ನಿ!

ಇಂದು ಕೂಡಿ ಕುಡಿದರಾಯ್ತು !
ಇಂದು ಹಾಡಿ ಕುಣಿದರಾಯ್ತು !
ದಿನದ ದಣಿವ ಕಳೆದರಾಯ್ತು !
ಅಂತು ಸುಖವ ಪಟ್ಟರಾಯ್ತು !
ಎಲ್ಲರೀಗ
ವಹಿಸಿಭಾಗ
ನಾಳೆಯಾಕೆ ? ಸಾಯಲದುವು !

"ಧಂ, ಕ, ಡ, ಢ, ಣ, ಧಂ, ಕ" ಎಂಬ
ದುಡಿಯ ದನಿಯು ಹುರುಪತುಂಬೆ
ಎಡಕೆ ಬಲಕೆ ಮೈ ಬಳುಕಿಸಿ,
ತಾಳ ಗೀಳ
ತಪ್ಪದಂತೆ
ಹೊರಗೆ— ಅಂಗಳದಲಿ ಕುಣಿವ

ಲೇಲೆ ಲೇಲಿ ಸ್ವರವು ವ್ಯೆಯು
    ಗಾಳಿಗಿಂತ ಹಗುರ ಮಾಡಿ
ಕುಟ್ಟಿಗಳನು ಸೊಂಟದಲ್ಲಿ
    ಇರಿಸಿಕೊಂಡು ಹಾರಿ ಹಾರಿ
        ರಾಗ ಗೀಗ
            ಕೆಡದ ರೀತಿ
"ದಟ್ಟಿಗೆ" ದುರು ಹಾಡುತಿರುವ

ದಿನದ ಕೂಲಿ ಕೊಂಚ ಕೊಂಚ !
    ಬಂಧು ಬಳಗ ಹೆಚ್ಚು ಹೆಚ್ಚು !
ನಾವು ಜನರ ಸೇವೆಯಲ್ಲಿ—
    ತೃಪ್ತಿ ನಮಗೆ ಇದ್ದುದರಲಿ—
        ರೀತಿ, ನೀತಿ
            ಶಾಂತಿ, ಪ್ರೀತಿ
ಇಂದಿಗು ಇವೆ ನಮ್ಮವರಲಿ

ಹಗಲು ಇಡೀ ದುಡಿಯಬೇಕು !
    ರಾತ್ರಿ ಸರೀ ಕುಣಿಯಬೇಕು !
ಎಲ್ಲರೊಟ್ಟು ಬೆರೆಯಬೇಕು—
    ಬಾಳ್ವೆ ಮಧುರವೆನಿಸಬೇಕು—
        ಅದುವೆ ಭೋಗ !
            ಅಲ್ಲೆ ಸಗ್ಗ !
ಅದುವೆ ಭಕ್ತಿ ! ಅಲ್ಲೆ ಮುಕ್ತಿ

———:———

* ದಕ್ಷಿಣ ಕನ್ನಡ ಜಿಲ್ಲೆಯ ಹರಿಜನರ ಹಾಡಿನ ದಾಟಿ.

# ಕೇರಳ

ಗಂಡುಮೆಟ್ಟಿನ ನಾಡು ಕೇರಳ
ಕೈಯ ನೀಡಿ ನಿಂತು—
ಹಸಿದು, ರೋಗದಲಿ ನರಳಿ, ನಿಂತಿದೆ
ಉಳಿಸಿ ಭಿಕ್ಷವಿತ್ತು ||

ರಾಜ್ಯ ಆಳಿಸಿ ಸಾಮ್ರಾಜ್ಯ ಅಳಿಸಿ ಅಧಿಕಾರಶಾಹಿ ನೀಗಿ
ಮಡಿವ ಜನತೆ ಬಡಬಾಳು ಬೆಳೆದು ಹಸನಾಗಲೆಂದು ಸಾಗಿ
ದೇಶ ಸುತ್ತಿ ಇಪ್ಪತ್ತು ಬಾರಿ ಮತ್ತೊಂದು ಬಾರಿ ಚಾಗಿ
ಪರಶುರಾಮ ಹೊಸರಾಜ್ಯ ರಚಿಸಿದ ಅಮಮ ಎಂಥ ತ್ಯಾಗಿ :

ಗಂಡುಕೊಡಲಿ ನೆತ್ತರನು ಕುಡಿದರ ನೆತ್ತರೋಕುಳಿಯನಾಡಿ
ಜನರ ಮೆಟ್ಟಿ ಅರಮನೆಯ ಕಟ್ಟಿ ಮೆರೆದವರ ಮೆಟ್ಟಿ ಆಡಿ
ಎಲ್ಲರೊಂದೆ ಎಂದರದು ಇರಲಿ ಇಲ್ಲದಿರೆ ರುಂಡ ನೀಡಿ
ಎಂದ ಕೊಡಲಿ ಈ ನಾಡ ಕಟ್ಟಿತು ಗಂಡುನಾಡ ಮಾಡಿ.

ಕಂಗು ತೆಂಗು ಬಾಳೆಗಳ ತೋಳುತಲೆ ತೂಗಿನಿಂದ ಒಲವು
ಹಚ್ಚಹಸುರು ಜುಳುಜುಳು ನಿನಾದದಲಿ ಹರಿವಹಳ್ಳ ಹೊಳೆಯು
ಬೆಟ್ಟ ತನ್ನ ಮಡಿಲಲ್ಲಿ ತಂಗಿದಾ ಹಾಲುಹರಿವ ನೆಲವು
ಗಂಡು ರಾಮನಾ ಪಾದತೊಳೆದ ಆ ಶಾಂತಶರಧಿ ತಡಿಯು.

ನೆಲವ ನಂಬಿ ಜಲನಂಬಿ ತಮ್ಮ ಜಂಬಲವ ತಾವೆ ನಂಬಿ
ಜನವ ನಂಬಿ ದುಡಿತವನೆ ನಂಬಿ ತೋಳನ್ನೆ ನಂಬಿ ನಂಬಿ
ಬೆವರ ಸುರಿಸಿ ಕಾಯಕವ ನಂಬಿ ಕೈಲಾಸ ಕಂಡು ನಂಬಿ
ಬೆಟ್ಟದೆಡೆಯ ನಂದನವ ಕಟ್ಟಿ ಬಾಳಿದರು ಬಾಳ ನಂಬಿ

ಭೂಮಿಯೊಡೆಯ ಧರ್ಮವನು ಹಿಡಿದು ಪಾಟವನು ಮಾಡಬಲ್ಲ
ಧನಿಕನಿವನ ಸರಿಸಿಂತು ರಾಜ್ಯವನು ಕಟ್ಟಿ ನಿಲಿಸಬಲ್ಲ
ಇಂಥ ರಾಜ್ಯದಡಿ ದುಡಿವ ಮಂದಿ ಜನರಾಗಿ ಇರಲು ಸಲ್ಲ
ಗಂಡುಕೊಡಲಿಯಾ ನಾಡು ಹೊಸತು ಸಾಮ್ರಾಜ್ಯ ಸಹಿಸಲಿಲ್ಲ.

ಮೊದಲ ಕ್ರಾಂತಿ ದಕ್ಷಿಣಕೆ ತಂದು ಕೆನ್ನೀರ ಹೋಳಿಯ ಹರಿಸಿ
ಹೊಸದು ದರ್ಪ ನೆಲದೊಡೆಯರರಸುತನ ಮೆಟ್ಟಿನಿಲ್ಲ ಬಯಸಿ
ಮುಸಲ ವೀರರಿಚ್ಚಸ್ನು ರೈತರ ನಾಯಕತ್ವ ವಹಿಸಿ
ಕತ್ತಿ ಹಿರಿದ ನಾಡಿಂದು ಹಸಿದು ಬೇಡುತಿದೆ ಅನ್ನ ಬಯಸಿ.

ನೆಲದ ಮಕ್ಕಳೊಂದಾಗಿ ನಿಂದರು ಸಂಕಲೆಗಳ ಕೀಳೆ
ನೆತ್ತರೋಕುಳಿಯನಾಡಿ ದುಡಿವರು ತಮ್ಮ ತಾವೆ ಆಳೆ
ತ್ಯಾಗದರ್ಶವನು ಜಗಕೆ ನೀಡಿದರು ಜನತೆಯಾಗಿ ಬಾಳೆ
ಅಳಿದರೆಷ್ಟೋ! ನರಳಿದವರೆಷ್ಟೋ? ಹಾ! ಒಂದು—ಎರಡು ಬಾಳೆ?

ಕ್ರಾಂತಿಯಿಂದ ಜನಿಸಿರುವ ನಾಡು ಕ್ರಾಂತಿಯಲಿ ಬೆಳೆದು ನಿಂತು
ಕ್ರಾಂತಿ ತರುವ ಸಂಕ್ರಾಂತಿಯಲ್ಲಿ ತಾ ಮುಂದೆ ಮುಂದೆ ನಿಂತು
ಕ್ರಾಂತಿ ಕಿಡಿಯ ಹಾರಿಸಿದೆ ದುಡಿವರನು ನಡೆಸಿ ಮುಂದೆ ನಿಂತು
ಕ್ರಾಂತಿಯುಸಿರು ಈ ನಾಡು ಅಳಿವುದೇ—ಎಂಥ ಕಾಲ ಬಂತು?

ಅತ್ತ ಮೊರಜ*ದಲಿ ಹೋಳಿಯಾಯ್ತು ಇನ್ನೇನು ಬೇಕು ಜನಕೆ?
ಇತ್ತ ಕನ್ನಡದ ಭೂಮಿಯಲ್ಲಿ ಮಲಬಾರ ಕ್ರಾಂತಿ ಜಿಗಕೆ—
ಕೈಯ್ಯನೆತ್ತಿ ಕಯ್ಯೂರ† ನೆಲದಿ ದುಡಿವವರ ಗುಡಿಯ ಬಲಕೆ
ನಿಂತು ಅಸುವ ನೀಗಿದರು ನಾಲುವರು ಸಗ್ಗ ತರಲು ಜಗಕೆ.

---

*ಮೊರಜದಲ್ಲಿ ರೈತರ ಸಮ್ಮೇಳನವನ್ನು ಸರಕಾರ ಚದುರಿಸಲು ಹೋಗಿ ಇಕ್ಕೆಡೆಯಲ್ಲೂ ಹಲವರು ಮಡಿದರು. ರೈತರ ನಾಯಕ ಕೆ. ಪಿ. ಆರ್. ಇನ್ನೂ ಅಜನ್ಮ ಶಿಕ್ಷೆ ಅನುಭವಿಸುತ್ತಿದಾರೆ.

†ಕಯ್ಯೂರಲ್ಲಿ ನಡೆದ ದುರಂತದಲ್ಲಿ ನಾಲ್ವರು ಫಾಶಿಶಿಕ್ಷೆಗೆ ಒಳಗಾದರು.

ಹೊನ್ನ ನಾಡು ದುಡಿವವರ ಬೀಡು ಆ ಗಂಡುಮೆಟ್ಟು ನಾಡು
ಅನ್ನಕಾಗಿ ಕೈನೀಡಿ ನಿಂತಿದೆ ನಾಡು ಇಂದು ಕಾಡು
ಕ್ರಾಂತಿಗಿಂದು ಸಂಕ್ರಾಂತಿ ಬಂದಿದೆ ಎಂಥ ದೀನ ಪಾಡು
ದೇಶ ಉಳಿಸೆ ಈ ಉಸಿರ ಉಳಿಸುವ ದಾರಿ ನೀನು ನೋಡು.

ಅತ್ತ ಹಸಿವು ಇನ್ನಿತ್ತ ರೋಗ ಮತ್ತತ್ತ ಸ್ವಾರ್ಥರೂಪ
ಅನ್ನ ಬೆಳೆದ ಕೈ ಅನ್ನವಿಲ್ಲದೆ ಕರಗಿ ನಿಂತ ರೂಪ
ಗಂಡುಗಲಿಗಳು ಹಸಿದು ಗಂಡುತನ ನೀಗಿ ನಿಂತ ತಾಪ
ಕರುಳ ಕರಗಿಸಿದೆ, ಮನವ ಮುದುಡಿಸಿದೆ ತಂದು ಜನಕೆ ತಾಪ.

ಬಂಗಾಲ ಬರಿದು ಕನ್ನಡದ ವಿಜಯಪುರ ಹಸಿದು ಹಿಂಗಿ ನಿಲ್ಲೆ
ಇತ್ತ ಕೇರಳದ ದೀನ ಜನತೆ ಬರಗಾಲ-ರೋಗದಲ್ಲೆ
ಅನ್ನ ಕೇಳಿ ನುಡಿಯೊದಗದಾಗೆ ದೀನತೆಯ ಮೋನದಲ್ಲಿ
ಅಳಿಯುತಿಹರು ಹಾ! ದೇಶ ಅಳಿಸುವ ಪ್ರಳಯಕಿಲ್ಲೆ ಎಲ್ಲೆ?

ಉಳಿದ ನಾವು ಉಳಿಸೋಣ ಉಳಿದವರ ಅಳಿಯದಂತೆ, ಮುಂದೆ
ನಮ್ಮ ಬಂಧು ಬಾಂಧವರು ನಮ್ಮ ತಮ್ಮಣ್ಣ ಅಕ್ಕ ತಂದೆ
ಹೃದಯ ಕರಗಲಿ ಮನ ಮರುಗಲಿ ಎಲ್ಲರೊಂದೆ ಎಂದೆ
ನೀಡಿ ಕೈಯ ಮುನ್ನಡೆದು ಉಳಿಸಿರಿ ಒನ್ನರೆಲ್ಲ ಇಂದೆ!

ಎಂಥ ನಾಡುಗಳು ಅಳಿಯುತಿಹವು ಹಾ! ಎಂಥ ಜನತೆ ನಮ್ಮ
ಬುದ್ಧಿ, ಹೃದಯ, ತೋಳುಗಳೆ ಅಳಿದರೆ ಎಲ್ಲಿ ಬಾಳು ತಮ್ಮ
ಸಾಕು ಮೌನ ಸುಖನಿದ್ರ ಸುಪ್ತತೆ—ಜಗವ ಮರೆತ ನಿಮ್ಮ
ಭಾವ ಅಳಿದು ಮುನ್ನಡೆದು ಉಳಿಸಿರಿ ಬಂಧುಜನರ ನಮ್ಮ

ಮಾನವತೆಯ ಮುಂದಿಟ್ಟು ವಿಶ್ವದ ಪ್ರೇಮಸಾಕ್ಷಿಯಾಗಿ
ಜಗವೆ ಒಂದು ಮನೆಯಾಗಿ ನಿಂದ ಸತ್ಯತೆಯ ಸಾಕ್ಷಿಯಾಗಿ
ಇತ್ತ ಕೇರಳದ ಬಂಧು ಸತ್ತ ಸೂತಕಕೆ ಭಾಗಿಯಾಗಿ
ಸಹಕಾರವಿತ್ತು ಮನವಾರೆ ಎತ್ತಿ ಉಳಿಸೋಣ ತ್ಯಾಗಿಯಾಗಿ.

---

# ಬಂಗಾಲ

ಬಂಗಾರ ಬಂಗಾಲ
ತುಂಬಿದೆ ಬರಗಾಲ
ತಂದಿದೆ ಕಂಗಾಲ
ಬರಗಾಲಽ ||

ಸುಜಲಾಂ ಸುಫಲಾಂ
ಸಸ್ಯ ಶ್ಯಾಽಮಲ
ಕವಿರವಿ ತೊಟ್ಟಿಲ
ಬಂಗಾಲ

ರಾಮಮೋಹನ ಬಂದ
ಚಿತ್ತರಂಜನ ತಂದ
ನಲಿದು ಕುಣಿದು ನಿಂದ
ಬಂಗಾಲ

ಅನ್ನವೆಂಬಿರೊ ಹೊನ್ನು
ಬಾಳೆಂಬಿರೊ ಚಿನ್ನು
ತಾನ-ಗಾನದ ಚೆನ್ನು
ಬಂಗಾಲ

ಬಾಳಿಲ್ಲ—ಸತ್ತಿಲ್ಲ
ಎದ್ದಿಲ್ಲ—ಬಿದ್ದಿಲ್ಲ
ಸದ್ದಿಲ್ಲ—ಸದ್ದೆಲ್ಲ
ನಿಂತಿಲ್ಲ

ಒಂದೆಡೆ ಹಣ ಹಣ
ಎಲ್ಲೆಲ್ಲು ಹೆಣ ಹೆಣ
ಎಲುಬಿನ ಕಣ ಕಣ
ತಿಲ್ಲಾಣ

ನರಳಾಟ ಹೊರಳಾಟ
ಹಸಿವಿನ ಚೀರಾಟ
ಉರುಳಾಟ ಕಾದಾಟ
ಕೂಗಾಟ

ಅತ್ತ ಬಿದ್ದಿದೆ ಹೆಣ್ಣು
ಬಿಡುವದು ಕಣು ಕಣ್ಣು
ಜೀವನ ಬರಿ ಮಣ್ಣು
ಬಿರುಗಣ್ಣು
ಎಲ್ಲೆಲ್ಲು ಬರಿ ಬರಿದು
ತಿಂಬವು ಬಿರಿಬಿರಿದು
ತೋಳ ನರೀ ಹದ್ದು
ನರರನ್ನು

ನನ ತಂಗಿ ತಂಗಿಲ್ಲ
ಹಸಿವಿನ್ನು ಹಿಂಗಿಲ್ಲ
ಅಭಿಮಾನ ಉಳಿದಿಲ್ಲ
ಬಾಳಿಲ್ಲಽ
ತಾಯಿಗೆ ಕರುಳಿಲ್ಲ
ತಂದೆಗೆ ಹುರುಳಿಲ್ಲ
ಸಂಸಾರ ಬಿರಿದೆಲ್ಲ
ಹುರಿಗಾಳು

ಜೀವನ ಜರಿ ಜರಿತ
ಭಾವನೆ ಒರಿ ಕುಣಿತ
ಪ್ರಾಣದ ಹಿರಿ ಮಣಿತ
ಜಲಪಾತ

ಸುಡುಗಾಡು ಸುಡುವೊಲ್ಲ
ಹೊಳೆಕೆರೆ ನಿಗಿವೊಲ್ಲ
ಹೆಣ ಹೆಣ ಹೆಣವೆಲ್ಲ
ಹೆಣನಾತ

ಕಾಡೆಂಬಿರೊ ಏನ
ನಾಡೆಂಬಿರೊ ಇನ್ನ
ಬೀಡೆನೆ ಜನರಿನ್ನ
ಉಳಿದಿಲ್ಲ
ಅರ ಜನ ಹೆಣ ಹೆಣ
ಅರೆ ಜನ ಅರೆ ಹೆಣ
ಉಳಿದಿದೆ ಹಣ ಹೆಣ
ರಣ–ತಾಣ

ಅನ್ನವೊ ಅಡಗಿದೆ
ಚೆನ್ನಾಗಿ ಹುದುಗಿದೆ
ಕೆಲವೊಂದು ಕೈಲಿದೆ
ಉಳಿದ್ವಿದೆ
ಜನರನ್ನ ಸಾಯಿಸಿ
ಹೆಂಗಳ ಮಾರಿಸಿ
ಮಂಗಳ ಮರೆಯಿಸಿ
ಉಡುಗಿದೆ !

ಕರೆವುದು ಬಂಗಾಲ
ನಡೆದಿದೆ ಕೇರಲ
ವಿಜಯಕೆ ಬರಗಾಲ
ಕರಿಗಾಲ

ಉಳಿದರೆ ಒಂಗಾಲ
ಅಳಿವುದು ಬರಗಾ
ನಮಗೆಲ್ಲ ಹಿರಿಗಾಲ
ಉಳಿಗಾಲ.

ಧರ್ಮವ ಬದಿಗಿಟ್ಟು
ದ್ವೇಷವ ತುಳಿದಿಟ್ಟು
ಜನತೆಯ ನೆನಪಿಟ್ಟು
ಪಡೆಹಿಟ್ಟು
ಬಾ ತಂಗಿ ಬಾ ತಮ್ಮ
ನಮ್ಮಪ್ಪ ನಮ್ಮಮ್ಮ
ಒಂದಾಗಿ ನಡೆಯೋಣ
ಬಾಳೋಣ.

———:———

# ವ್ಯರ್ಥಾಲಾಪ

ಹೊಸದೆನಗೆ ಬೇಕಿಲ್ಲ, ಹಳೆಯದೇ ಸಾಕೆಲ್ಲ
ಎಂದೆನುತ ಮುಗ್ಗಲಸು ಮುಕ್ಕಲೇಕೆ ?
ಹೊಸದಾಗಿ ಜನಿಸಿರುವ ಎಳೆಯಕೂಸಿನ ಕರುಳ
ಕಿತ್ತೊಗೆಯದೆಯೆ ಸುಮ್ಮನಿರುವೆಯೇಕೆ ? ೧.

ಹೊಸದು ಹಳಸಿದೆಯೆನುವ ಮಾತೇನು ಹೊಸದಲ್ಲ !
ನಿನ್ನಂತೆ ಬಲು ಜನರು ಅಂದರದನು !
ಗೂಗೆ 'ಗೂಗೂ' ಎನಲು ರವಿಯು ಹೆದರುವನೇನು ?
ಕತ್ತಲೆಯ ಹುಟ್ಟಡಗಿ ಪ್ರಗತಿ ಬಹುದು ! ೨.

ಜೀವನದ ಹೊಗೆಬಂಡಿ ಕಾಲಹಳಿಗಳ ಮೇಲೆ
ನಡೆಯುವುದು ಮುನ್ಮುಂದೆ ಚಣಕು ಚಣಕು
ಅಲ್ಲಲ್ಲಿ ಉಳಿದವರು ತಮ್ಮದೇ ಜಗದ ತುದಿ
ಎಂದರದಕಾರು ಹೊಣೆ—ಅವರೊ, ಜಗವೊ ? ೩

ಇದೆ ಕವಿತೆ, ನಾನೆ ಕವಿಯೆನುವ ಕಾವ್ಯಾಲಾಪ
ಹೊರಡಿಸಿಹೆ—ಬರಿ ಹುಚ್ಚು – ಅಯ್ಯೊ ಪಾಪ !
ಕವಿ ಮಿತ್ರನಾದೊಡೇಂ ಕವಿಯೆನುವ ಭ್ರಮೆಯೇಕೆ ?
ಕಂಡಿಹೆಯ, ಕಾಣುವೆಯ, ಕಾವ್ಯರೂಪ ? ೪.

ವಾಲ್ಮೀಕಿ ಷೇಕ್ಸ್‌ಪಿಯರ ಕಾಳಿದಾಸಾದಿಗಳ
ಕೃತಿಗಳಂತರಗಂಗೆ ಬಲ್ಲೆಯೇನು ?
ಮನುಜಜೀವನ ಮೊದಲು, ಪ್ರಕೃತಿ ಬರಿಹಿನ್ನೆಲೆಗೆ
ಅದ ಮರೆತು ಹರಟುತಿಹೆ ಪೊಳ್ಳು ಸೊಲ್ಲು ! ೫.

ಪ್ರಕೃತಿಯನು ಹೊಗಳಿರುವೆ – ನೀನಿಂತು, ನೀನಂತು
ನೀನೆ ಜಗಕಾಧಾರೆ, ಜೀವಧಾರೆ
ಅದರೊಳೇನೇನಿಹುದು ಕುರುಳು ಕೈಕಾಲುಗಳು
ಹೊದಿಕೆ ಹಾಸಿಕೆಗಾಸಕಣ್ಣು ಒಡಲು ! ೬.

ಅದರದರೊಳಗಿರುವ ಆತ್ಮವನು ಕಾಣದೆಯೆ
ಉಳಿದೆಲ್ಲ ಹೊರರೂಪ ಪೇರಿಸಿರುವೆ
ಜೀವವಿಲ್ಲದ ದೇಹ ಆತ್ಮವಿಲ್ಲದ ಪ್ರಕೃತಿ
ಪ್ರಗತಿಯೆನ್ನಲು ನಿನಗೆ ವೈದ್ಯನೆ ಗತಿ ! ೭.

ನಮ್ಮ ಜನಜೀವನವ ಹಾಸುಹೊಕ್ಕಿಹ ಕಾವ್ಯ
ಉಳಿದಿಹುದು-ಉಳಿದೆಲ್ಲ ಜೊಂತೆಯಲ್ಲಿ ?
ಮುಂದೆ ಜಗ ಉರುಳಿದೊಲು ಹಿಂದೆ ಬಿದ್ದಿಹುವೆಲ್ಲ
ಕೊಚ್ಚೆಮೋರಿಯ ಕಸದ ಗುಡ್ಡೆಯಲ್ಲಿ ! ೮.

'ರಾಮು ರಾಮೂ' ಎಂದು ವಾಲ್ಮೀಕಿ ಕೋಕಿಲವು
ನುಡಿದಂತೆ ನೀನೇಕೆ ನುಡಿಯದಿರುವೆ
ಭಕ್ತಿ ಸಾಲದೊ ನಿನಗೆ, ಶಕ್ತಿಯೇ ಸಾಲದೊ
ಯುಕ್ತಿಯಿಲ್ಲವೊ ಧೈರ್ಯ ಸೊನ್ನೆಯಾಯ್ತಾ ? ೯.

ತನ್ನೊಳಗೆ ಹುರುಳಿಲ್ಲ ! ಮತ್ತೊಬ್ಬನನು ಎತ್ತಿ
ಅವನು ಕಾರಣಪುರುಷ–ನಾನು ಕೂಡ
ಅದಕೆ ಕಾರಣಪುರುಷ ಎನುತ ಎರವಲ ಹಿರಿಮೆ
ಕೊಂಡು ಕುಣಿಯುವ ಬುದ್ಧಿ ಸಾಕು ಸಾಕು ! ೧೦.

ಮೂರು ಸಾವಿರ ವರುಷ ಹಿಂದೆ ಬರೆದರಗುಣದ
ಬಂಡವಾಲಕೆ ಬಡ್ಡಿ ನಿನಗೆ ಬೇಕೊ
ನಿನ್ನ ದುಡಿತಕೆ ಮಾತ್ರ ಕೂಲಿ ದೊರಕೀತಿಲ್ಲಿ
ನೀಡುತಿಹೆ ಅದನಿಲ್ಲಿ – ಕಯ್ಯ ಚಾಚು ! ೧೧.

ನಿನಗೆ ಕನ್ನಡಿ ಬೇಕು - ನಿನ್ನ ನೀನರಿಯಲಿಕೆ
ಅದ ಮರೆತು ಉಳಿದರನು ತೆಗಳುತಿರುವೆ
ನಿನ್ನ ನೀನರಿತಂತೆ ನಿನ್ನತನವ ಮರೆತಂತೆ
ಮುಂಬರುವೆ ಪ್ರಗತಿಯಲಿ - ಇದುವೆ ಸತ್ಯ ! ೧೨.

ಸಾಹಿತ್ಯ-ಜೀವನದ ನುಡಿಗನ್ನಡಿಯು ಎನುವ
ಮಾತನೇ ಮರೆತೆಲ್ಲೊ ಎಡವಿಬಿದ್ದು
ವ್ಯರ್ಥ ಆಲಾಪಿಸಲು ಕಾವ್ಯವಾಗುವುದೇನು ?
ಬಂದಿಲ್ಲಿ ಜೀವನದ ನೈಜ ನೋಟ ! ೧೩.

ಕೋಗಿಲೆಯು ಹಾಡುವುದೆ ? ಉಸಿರೆ ಇಲ್ಲದಕಿಂದು
ನೂರ್ಲಕ್ಷ ಹೆಣಗಳಿಂ ಹೊರಟ ಹೊಗೆಯು
ಆಗಸವನಾಕ್ರಮಿಸಿ ದುರ್ಗಂಧ ಪೂಸಿರಲು
ಹಾಡುವುದೆಕೋಗಿಲೆಯು, ನೋಡು ಬಾರೈ ! ೧೪.

ಆ ಕಡೆಗೆ ಕಣ್ತಿರುವು — ಅದು ಒಂದು ಸಂಸಾರ !
ಎಲ್ಲಿ ನಿನ್ನಾ ಪ್ರೇಮ, ಎಲ್ಲಿ ದೈವ ?
ಆಕೆ ಮೂಳೆಯ ಮೂಟೆ, ಅವನು ಬೂದಿಯ ಮೊಟ್ಟೆ
ಮಕ್ಕಳೋ ಬರಿಮುದ್ದೆ - ಕಸದ ರಾಸಿ ! ೧೫.

ಹೂಗಳಿದೆಗಂಧವನು ಯಾರಿಗಾಗೊಯ್ಯುವನು
ಮೂಳೆಗಾಗಿಯೊ ಇಲ್ಲ ಮಾನವನಿಗೊ ?
ಮಾನವನೆ ಜಗದಮಣಿ ! ಅವನೆ ಇಲ್ಲದೊಡೇನು
ಪ್ರಕೃತಿ ವಿಕೃತಿಯೊ ಇಲ್ಲ ಪೈಶಾಚವೊ ! ೧೬.

ಮಾನವನಿಗಾಗೆಲ್ಲ - ಮಾನವತೆಗಾಗೆಲ್ಲ
ಅದನುಳಿಸದೆಯೆ ಬರಿದೆ ಕೂಗು ಏಕೆ ?
ಸಾಹಿತ್ಯಜೀವನದ ಅಡಿಗಲ್ಲ ಮೇಲ್ನಿಂತು
ಮಾನವತೆ ಧ್ವಜವ ಮೇಲೇರಿಸಿರಲಿ ! ೧೭.

ಅದ ತೊರೆದು ಕೋಗಿಲೆಯು ಹಾಡುವುದು, ನವಿಲುಗಳು
ಕುಣಿಯುವುವು; ಪ್ರೇಮಿಗಳು ವಿಹರಿಸುತ್ತ
ನದಿಯು ಹರಿಯುತಲಿಹುದು ಪವನಸುಯ್ಯುಡುತಿರುವ
ಎನುತ ಈ ಬರಡುನುಡಿ ಕಾವ್ಯವೇನು? ೧೮.

ಜೀವನದಿಗಳು ಬತ್ತಿ ಬಾಳೆಲ್ಲ ಬರಡಾಗಿ
ಬೆಳೆಯೆಲ್ಲ ಬತ್ತಿರಲು ಹೂಗಳೆಲ್ಲಿ?
ಹೊಟ್ಟೆ ಹಸಿವಾರಿಸದೆ ಸೌಂದರ್ಯ ನೀಡುವುದು
ಕಗ್ಗಲು ಕೊಟ್ಟಂತೆ ಕೂಳಬದಲು! ೧೯.

ಬರಗಾಲದಲಿ ಬಿದ್ದು ಕಾಳೆರಡು ಕಾಣದೆಯೆ
ಕಾಲವಶರಾಗಿರಲು ಕೋಟಿ ಮಂದಿ
ನೀನೆಲ್ಲೊ ಕುಳಿತಿರುವೆ ಅಜ್ಞಾನಕೋಟೆಯಲಿ
ಕಾಣುತಿಹೆ ಕಲ್ಪನೆಯ ಕನಸಗೊಂದಿ! ೨೦.

ರುಚಿಗಳಿವೆ ನೂರಾರು, ಬೇಕಾದುದೆಲ್ಲರಿಗು
ಒಂದಿಹುದು - ಅದು ಅನ್ನ - ಮರೆಯಬೇಡ!
ಪ್ರಗತಿ ಬೇಕೆಲ್ಲರಿಗು, ಅದಬಡಿಸಬೇಕಾವು
ಅನ್ನ ಅನ್ನವೆ ಹೊರತು ಉಳಿದುದೇನು? ೨೧.

ಸಾಹಿತ್ಯ ನಿಜಕು ಪ್ರೊ|| ಕ್ರಸ್ಟಿಸನ ಹಾಸಿಗೆಯಹುದು!
ಬೇಡುವುದು ನಿನ್ನಿಂದ ಕೆಲವು ಕ್ರಮವ!
ಜೀವನವ ಚಿತ್ರಿಸುವ ಸಾಹಿತ್ಯವುಳಿಯುವುದು
ಉಳಿದುದಕೆ ಜನ್ಮದಿನ ಬಂತು ನಿಧನ! ೨೨.

ಮನದ ಕತ್ತಲೆ ಕಳೆದು ಅರಿವ ಬೆಳಕನು ಚೆಲ್ಲಿ
ಅರಿವಿನಿಂ ಪ್ರೇರಿಸುವುದು ನೈಜಕೆಲಸ!
ಆ ಕಾರ್ಯವೇ ಇಂದು ಅನ್ನಬಟ್ಟೆಯ ಮೂಲ
ಅದುವೆ ಸಾಹಿತ್ಯದಿಂ ತಂದ ಕೂಳು! ೨೩.

ಸಾಹಿತ್ಯದಿಂ ಕ್ರಾಂತಿ ಉಜ್ವಲಿಸಿ ದಿನದಿನಕು
ಹಳಸಿದುದನುರಿಸುತ್ತ ಹೊಸದ ಸೃಜಿಸಿ
ಸುಖಶಾಂತಿಗಳ ಹರಹಿ ಕೃತಕಾರ್ಯವಾಗುವುದು
ಅದುವೆ ಜೀವಕೆ ಮೂಲ - ಪ್ರಗತಿಶೀಲ ! ೨೪.

---

# ಸಿಂಕ್ಲೇರನಿಗೆ *

ಹಸಿದ ಹೊಟ್ಟೆಯ ಹೇರ ಹೊರಲಾರದಿಹ ಜನರ
ಕಾಸಿನಾಸೆಯ ತೋರಿ ಹೇಸಿಗೆಯ ನರಕವಲಿ
ದೂಡಿದುಡಿಸುವ ದುಡ್ಡಿನಪ್ಪಗಳ ವಿಶ್ವವನು,
ನಾಗರಿಕ ಜೀವನದ ಮೇಲ್ಮುಸುಕ ಮರೆಯಲ್ಲಿ
ಬಚ್ಚಿಟ್ಟ ಬ್ರಹ್ಮಾಂಡ ಬಯಲು ಮಾಡಿದ ಬ್ರಸ್ಟ್ರ
ಸಿಂಕ್ಲೇರ ಅಪ್ಪನನೆ ನಿನಗೆ ಜಗ ಚಿರಋಣಿಯು !
ಬಾಳ ಕಗ್ಗಾಡಿನಲಿ ಸಿಕ್ಕಿ ಸೊರಗಿದ ದೀನ
ಕೂಲಿಗಾರನ ಜೀವ - ನೋವು ಕಾವಿನ ಬಾಳು -
ಕಾಸುಗಾರನ ಕೈಯ ರಾಕ್ಷಸೀ ಹಿಡಿತದಲಿ
ದಬ್ಬಾಳಿಕೆಯ ಕ್ರೂರಯಂತ್ರದಲಿ ನಶಿಸುತಲಿ
ಅಂಧಕಾರದಿ ಬರಿಯ ಧೂಳಾಗಿ ಬೀಳುವುದ ತೋರಿಸಿದೆ.

ದೂರದಿಂ ನೋಡಿದೊಡೆ ಕಾರ್ಖಾನೆ
ಬಾಳು ಬಲು ಬಲು ಚಂದ, ಕಾಸ ಕೂಡಿಸಬಹುದು
ಎಂಬ ಭ್ರಮೆ ಮುಸುಕುವುದು, ಬೆಳಕಿಲ್ಲೆ ಇಹುದೆಂಬ
ಹಿಗ್ಗಿನಲಿ ಬಂದೊಡನೆ - ಬಯಕೆಗಳು ಬಯಲಾಗಿ
ಎದೆಯೊಡೆದು ನೀರಾಗಿ - ಕತ್ತಲಲಿ ಕುಗ್ಗುವುದು !
ಜೀವ ಮೊದಲಿಂ ತುದಿಗೆ ಮೋಸ - ಮೋಸದಂತೆ !
ಕಸವನೇ ರಸವೆಂದು ಮರುಳುಗೊಳಿಸುವ ಜಾಲ !
ಅಮೆರಿಕದ ಜೀವವಿದು ! ಒಳಗನರಿಯದೆ ಬರಿಯ
ಹೊಳೆವಹೊರಗನೆ ಕಂಡು ಮುಗ್ಧರಾಗುತ ಓಡಿ

---

* The "Jungle" ಕಾದಂಬರಿಯನ್ನು ಓದಿದಮೇಲೆ ಬರೆದುದು.

ಸಾರಿ ಬಂದವರೆನಿತು ಜಾರಿಬಿದ್ದರು ಬಲೆಗೆ !
ಕೂಲಿಗಾರನ ಕಷ್ಟ ಬಣ್ಣನೆಯ ಬಣ್ಣಕ್ಕೆ
ನಿಲುಕದಿದೆ - ಕಲ್ಲೂಡ ಕರಗುವುದು ಕೇಳುತದನು !
ಎಲ್ಲವನು ವರ್ಜಿಸುತ, ಕಷ್ಟಗಳ ಬೆಟ್ಟಗಳ
ಬೆನ್ನಮೇಲ್ಹೊರುವುದಕೆ ಸುಖವಿರಹಿ ಬಂದಿಹನು !
ಆವುದನು ಅಮೃತವೆಂದೆಣಿಸಿ ಬಂದಿರ್ದನದೆ
ಸರ್ಪವಿಷ ! ಜೀವನವನು-ರಸವನ್ನು-ಕಾವನ್ನು
ಮೆಲ್ಲಮೆಲ್ಲನೆ ಹಿಂಡಿ ಹಿಪ್ಪೆಯಾಗಿಪ ಯಂತ್ರ !
ಕಂಪರೂಸುವ ಹೂವಹಾರವೆಂದಿರ್ದುದಿದು
ಫೂತ್ಕಾರ ಮಾಡುತಿಹ ಉರಿವ ಹಾವಿನ ಹೆಡೆಯು !
ಬಂಡವಾಳದ ಬಾಳು ! ಮೊದಲಿನಿಂ ಕೊನೆವರೆಗು
—ಕಾರ್ಖಾನೆ, ಸಹಕಾರ ಸಂಘಗಳು, ಸರ್ಕಾರ—
ಎಲ್ಲ ಮೋಸದ ಬೀಡು ! ಮೋಸವೇ ಉಸಿರವಕೆ !
ಮೇಲ್ಮಾತ್ರ ಬಲು ಚೆನ್ನ ! ಮನಸೆಳೆವ ಮುಗ್ಧಬಗೆ !
ದೂರದಿಂ ನೋಡುತಲೆ ಹೃದಯ ಸಾರುವುದಲ್ಲಿ !
ಬಳಿಗೆ ಸಾರುತಲೊಮ್ಮೆ ಬಿದ್ದರಾಯಿತು ಬಲೆಗೆ,
ಜೊಂಡದಿಂ ಹೊರಬೀಳ್ವ ಆಸೆ ಬರಿ ಹುಡಿಗನಸು !
ಸುತ್ತೆಲ್ಲ ಹಸುರುವನ - ಒಳಗೆ ಗಾಢಾಂಧತೆಯು !
ಮುಸುಕಿರುವ ಹೆಗ್ಗವಿಯು ! — ಜೀವ ಬರಿ ಕಗ್ಗಾಡು !
ಕಗ್ಗಾಡು ! ಗಾಢಾಂಧ ! ಕರೆದೊಯ್ಯುವವರಿಲ್ಲ !
ನೂರಾರು ಕವಲುಗಳು - ಎಲ್ಲ ಒಂದೆಡೆಗೇ !
ದಾರಿಯರಿಯದು, ವೇಳೆಯರಿದೆಯೆ ಮುನ್ನಡೆದು,
ಕಾದು ಕುಳಿತಿಹ ಕ್ರೂರ ಧನಪ್ರೇತಗಳ ಬಾಯ್ಗೆ
ತುತ್ತಾಗಿ, ತೊತ್ತಾಗಿ, ಸಾಯುವುದು ! ಕೂಲಿಗಳ
ಜೀವನಕೆ ಬೆಳಕಿಲ್ಲ ! ಗಾಢಾಂಧತೆಯ ಬೀಡು !
ಅಂತಾದರಿದರಿಂದ ಕೂಲಿಗಾರಗೆ ಮುಕ್ತಿ
ದೊರೆಯದೇ ? ಕನಸುಗಳ ಬಯಕೆಗಳ ಬಸಿರಿನಲೆ

ಬಡಿದು ಕೊಲ್ಲುವುದೇನು ? ಬೇರೇನು ಗತಿಯಿಲ್ಲ !
ಬಂಡವಾಳದ ಹಿಡಿತ ಬಳ್ಳು ಭದ್ರ - ಜಗವೆಲ್ಲ
ಕಾಸಿಗೊಡೆಯರ ಕೈಲಿ ನಶಿಸಿಹೋಗುತಲಿಹುದು !
ದುಡ್ಡಿನಲ್ಲಿಪೆ ಜೀವ ! ದುಡ್ಡಿನಿಂದಲೆ ಜೀವ !
ಉಳಿದಿಹುದು ಏನೆಮಗೆ ? ಕೂಲಿಗಾರರಿಗೇನು ?
ದುಡಿದು ದುಡಿದೂ ಇಂತೆ ಮಡಿಯುವುದೆ ಫಲವೇನು ?
ಕಗ್ಗಾಡಿನಂಧತೆಯ ಬೆಳಗಿ ದಾರಿಯತೋರ್ವ
ಕಿರಣವೆಮಗಿಲ್ಲವೇ ? - ಆಸೆಯಿದೆ ! ಧೈರ್ಯವಿದೆ !
ಬಂಡವಲದಂಗಾಂಗ ಛಿದ್ರಛಿದ್ರವ ಮಾಡಿ
ಕಿತ್ತೊಗೆದು, ಕೂಲಿಗಳ ಜೀವ ಸವಿಯಾಗಿಪುದು
ಕಗ್ಗಾಡ ಬೆಳಗಿಸುವ ಕಿರಣ ಹೊರಹೊಮ್ಮುತಿದೆ
ಕೂಲಿಗಾರರ ಶಕ್ತಿ ! ಸಾಮ್ಯವಾದದ ಕತ್ತಿ !
ಸಾಮ್ಯವಾದವದೊಂದೆ ಶತ್ರುವಿಗೆ ಹಿರಿಮದ್ದು !
ಸಾಮ್ಯವಾದವದೊಂದೆ ಶತ್ರುವಿಗೆ ಸಿಡಿಮದ್ದು !

"ಎಮ್ಮದಾಯ್ತು ಚಿಕಾಗೊ ! ಎಮ್ಮದಾಯ್ತು ಚಿಕಾಗೊ !"
ಎಂಬ ಕೊನೆಯಾಕೂಗು ಬಂಡವಲದೆದೆ ಒಡೆದು
ದಿಕ್ಕುದಿಕ್ಕುಗಳಲ್ಲಿ ಮೊಳಗುವುದು – ಗುಡುಗುವುದು !
"ಎಮ್ಮದಾಯ್ತು ಚಿಕಾಗೊ !" ಕೂಗು ಬದಲಿಸುತಿಂದು
ಕೂಲಿಗಾರರ ಕೊರಳಿನಿಂದಿಂತು ಹೊರಡುತಿದೆ !
"ವಿಶ್ವವೇ ನಮ್ಮದಿದೆ ! ನಮ್ಮ ಹಕ್ಕಿದು ವಿಶ್ವ !
ವಿಶ್ವ ನಮ್ಮದೆ ಅಹುದು ! ನಮ್ಮದಾಯಿತ್ತಾ ವಿಶ್ವ !"

——:——

# ಕನ್ನಡದ ಬೆಳೆ

ಹೊನ್ನಬೆಳೆ ಬರುತಿದ್ದ ಕನ್ನಡದ ಹುಲುಸುಹೊಲ
ಬೀಳು ಬಿದ್ದಿಹುದಿಂದು ಬಂಜೆ ಬಯಲಾಗಿ
ಉತ್ತುವುದು ಬಹಳಾಯ್ತು ಬಿತ್ತುವರೆ ಬರಲಿಲ್ಲ
ಮುನ್ನ ಬಿತ್ತಿದ ಬೆಳೆಯೆ ಇದುವರೆಗೆ ಕೊಯಲಾಗಿ

ಬರಗಾಲ ಬಂದಿಹುದು ಸಿರಿಯ ತವರೂರಿಗೆ
ಹೆರರ ಹಾವಳಿ ಬಂತು ನಮ್ಮ ನಡುಕೇರಿಗೆ
ಕೊಟ್ಟುಬಿಟ್ಟೆವು ಹೊಲವ ಪರಜನಕೆ ಕೋರಿಗೆ
ನಮ್ಮ ಹಾಳನು ಕಾಂಬ ಕಣ್ಣಿಹುದು ಯಾರಿಗೆ ?

ಕೆಲರು ಬಿತ್ತುತಲಿಹರು ಫಲಬರದ ಪಯರನ್ನು
ನಮಗೆ ಬೇಡಾದುದನೆ ಬಿತ್ತುವರು ಕೆಲರು
ಹಸಿವೆ ಸುಡುತಿರುವಾಗ ಹೂದೋಟಗಳ ಬೆಳೆಸಿ
ಹಿಗ್ಗಿನಲಿ ಉಬ್ಬಿನಲಿ ಕುಣಿಯುವರು ಕೆಲರು !

ಹಸನಮಾಡಿದ ಹೊಲದಿ ಕಸವ ಬೆಳೆಸುವರಿಲ್ಲಿ
ಹೆರರ ದನಗಳಿಗೆಂದು ಹುಲ್ಲು ಬೆಳೆಸುವರಲ್ಲಿ !
ಕನ್ನಡದ ಜನಪದಕೆ ಅನ್ನ ಸಿಗದಿರುವಾಗ
ಅನ್ಯನಾಡಿನ ಜನಕೆ ಹಣ್ಣು ಕಳಿಸುವರಲ್ಲಿ !

ನಮ್ಮ ಕನ್ನಡ ಹೊಲವು ನಮ್ಮವರ ಸೊತ್ತಾಗಿ
ಇದರಲ್ಲಿ ನಮ್ಮವರ ಉಳುಮೆ ಬಿತ್ತಿಗೆ ಸಾಗಿ
ನಮಗೆ ಬೇಕಾದುದನೆ ನಾವು ಬೆಳೆಯುವರಾಗಿ
ಕನ್ನಡದ ಬೆಳೆ ಬರುವುದೆಂದು ನಮಗಾಗಿ ?

ಅಲ್ಲಲ್ಲಿ ಇಷ್ಟಿಷ್ಟು ಒಳ್ಳೆ ಬೆಳೆ ಬಂದರೂ
ಕಳ್ಳಿ ಕರಿಕೆಯು ಎಂಬ ಬೆಳೆದಿಹುದು ಬರಿದೆ
ಬಲ್ಲವರ ಗುತ್ತಿಗೆಯು ಎಲ್ಲ ನಿಕ್ಷೇಪವಾಗಿ
ಎಲ್ಲ ಮನೆಯೊಳು ಕಣಜ ತುಂಬಿ ಬರದೆ ?

ನಮ್ಮ ಹೊಲದೊಳು ಮತ್ತೆ ಬಂದ ಹರಿಹರ ಬುಕ್ಕ
ಬಸವ ಮಾಧವರ ಬೆಳೆ ತಳತಳಿಸಿ ಬೆಳೆದು
ಶರಣ ದಾಸರ ಪಯಿರು ಮಹಾದೇವಿ ಮಲ್ಲಮ್ಮ
ಚನ್ನಮ್ಮ ಹೊನ್ನಿ[illegible]ರ ರನ್ನದೋಟವು ಹೊಳೆದು

ನಮಗಾಗಿ ಹೊಸ ಸುಗ್ಗಿ ಕನ್ನಡದ ಜನ ಹಿಗ್ಗಿ
ನೆರೆನಾಡಿಗೂ ನಾವು ಎರವಲನು ಕೊಟ್ಟು
ಭಾರತಿಗೆ ಬಲವಾಗಿ ವಸುಮತಿಗೆ ಚೆಲುವಾಗಿ
ಸಕಲರಿಗೆ ಗೆಲವಾಗಿ ನಮ್ಮ ಹೊಸ ಹುಟ್ಟು

ನಾವೆಂದು ಬಾಳುವೆವೊ ನಮ್ಮ ನೆಲವಾಳುವೆವೊ
ದಾಸ್ಯವನು ಹೂಳುವೆವೊ ಅಂದೆ ನಿಜವಾಗಿ
ಕನ್ನಡದ ಬೆಳೆಮೆಚ್ಚಿ ಮುನ್ನೀರುಗಳ ದಾಟಿ
ಮನುಕುಲವ ತಣಿಸುವುದು ಕಲ್ಪಕುಜವಾಗಿ

ಇದಕಾಗಿ ಒಂದಾಗಿ ದುಡಿಯುವೆವೆ ನಾವು ?
ಇದರ ಸಾಧನೆಯಲ್ಲೆ ಮಡಿಯುವೆವೆ ನಾವು ?
ಇದಕಡ್ಡ ಬಂದುದನು ಕಡಿಯುವೆವೆ ನಾವು ?
ಈ ಗುರಿಯ ಕಡೆ ಕೂಡಿ ನಡೆಯುವೆವೆ ನಾವು ?

ಕಿರಿಯರಿವನೇ ಕೇಳಲಿ
ಹಿರಿಯರುತ್ತರ ಹೇಳಲಿ !

——:——

## ಏಷ್ಯಾ

ಜಗಕೆ ಧರ್ಮದ ದಾನಕೊಟ್ಟ ಬೆಳಕಿನ ಚಿತ್ತ
ಜಗದ ಸಂಸ್ಕೃತಿಗಸುವನಿತ್ತ ಪಾವನಚಿತ್ತೆ
ಜಗದರ್ಥ ಜೀವಿಗಳ ಪೊರೆವ ಪುಣ್ಯದ ಗೊತ್ತಿ
ನಿನ್ನ ಗತವೈಭವವು ಮರಳುವುದೆ ಮತ್ತೆ ?
ಏನಿದ್ದೆ ಏನಾದೆ ಏಷ್ಯಾ
ನಿನ್ನನಾವರಿಸಿಹುದು ದಾಸ್ಯ !

ಸೂರ್ಯ ಹುಟ್ಟುವ ಸ್ಥಳದಿ ಕಾರಿರುಳು ಮುಸುಕಿಹುದು
ಎಲ್ಲ ಬೆಳೆಯುವ ನೆಲದಿ ದಾರಿದ್ರ್ಯ ಮುಸಗಿಹುದು
ತತ್ತ್ವಗಳ ತವರಿನಲಿ ಅಜ್ಞಾನ ಹರಡಿಹುದು
ಅಂತವಿಲ್ಲದ ಅಧಃಪಾತ
ಮಾಡಿಹುದು ನಿನ್ನ ಬರಿ ಪ್ರೇತ !

ಶ್ವೇತವರ್ಣದ ಶಿಲುಬೆ ಘಾಯಗೊಳಿಸಿದೆ ನಿನ್ನ
ಪೀತವರ್ಣದ ಪಾಪಿ ಕೊನೆಗೆ ಹಾಕಿದ ಕನ್ನ
ಕೆಂಪುವರ್ಣವು ಸಹಿತ ಗಾಸಿಗೊಳಿಸಿದೆ ನಿನ್ನ
ಯಾರು ಹೊಕ್ಕರು ನಿನ್ನ ಸುಲಿದು ಕೊಟ್ಟರು ಬನ್ನ
ನಿನ್ನ ಮೇಲಿದೆ ಜಗದ ವಕ್ರದೃಷ್ಟಿ
ಸುಲಿಗೆಗಾಗಿಯೆ ಆಯ್ತು ನಿನ್ನ ಸೃಷ್ಟಿ !

ರಾಕ್ಷಸೀಲಾಲಸೆಯ ನೀಚಶಿಶು ಜಾಪಾನ
ನರಕಯಾತನೆಯಿಂದ ಸಾಯುತಿದೆ ಚೀನ
ದಾಸ್ಯ ದಾರಿದ್ರ್ಯಮಯ ನಮ್ಮ ಹಿಂದೂಸ್ಥಾನ
ತನ್ನ ಹಿತದಲಿ ಜಾಣ ತರುಣ ತುರ್ಕಸ್ಥಾನ
ಇನ್ನುಳಿದ ನಾಡುಗಳ ಕೇಳ್ವರಾರು ?
ಹೆಸರಿಗಿದೆ ಸರಕಾರ, ಆಳ್ವರಾರು ?

ಇಡಿಯ ಏಷ್ಯಾಖಂಡ ಹಿರಿಯ ಬಂದೀಖಾನೆ
ಪರರ ಬಲೆಯಲಿ ಸಿಕ್ಕಿಬಿದ್ದ ಹುದ್ದಾನೆ
ಇಲ್ಲಿ ಬಡತನ ದಾಸ್ಯ ಅಜ್ಞಾನ ಬಹುಜೇನೆ
ಮೇಲೆ ತುಳಿಯುತಲಿಹುದು ಪರರಾಷ್ಟ್ರಗಳ ಸೇನೆ !
ಇದಕುಂಟೆ ಈ ನರಕದಿಂದ ಮುಕ್ತಿ?
ಎಂದು ಸಿಡಿದೇಳುವುದು ಇವರ ಶಕ್ತಿ ?

---

# ಮಾನವ ಸಮಾಜ

ರಂಗು ರಂಗಿನ ಬೆಡಗ ತೊಟ್ಟು ಜಗವೆಂಬಳವ
ರಂಗದಲಿ ವಿವಿಧ ಭಂಗಿಯಲಿ ಜನಜಂಗುಳಿಯು
ಅಂಗಗಳ ಕುಣಿಕುಣಿಸು ಕಿಂಕಿಣಿಗಳುಲಿಯುತಿರ
ಓ ಮನೋಹರಿ ಎಲೆ ಭಯಂಕರಿ
ಓ ರೂಪವತಿ ಎಲೆ ಪಾಪಮತಿ
ನಿಷ್ಕರುಣಿ ನಿರ್ಲಕ್ಷ್ಯ ಮಾನವ ಸಮಾಜ!

ಜನನಮರಣದ ತಾಳ ಜೀವನದ ರಾಗಕ್ಕೆ
ನೃತ್ಯವಿಪ ಮದ್ದಳೆಗೆ ಕಾಲಪುರುಷನ ಗತಿಗೆ
ಸಿಡಿವ ಮುಕುಟದ ಸದ್ದು ಯುದ್ಧಗಳ ಗದ್ದಲಕೆ
ಇತಿಹಾಸಗಳ ಸುಯ್ಲು ಸಂಸ್ಕೃತಿಯ ಶೋಕಕ್ಕೆ
ಕುಣಿವ ಮನೋಹರಿ ಎಲೆ ಭಯಂಕರಿ
ಓ ರೂಪವತಿ ಎಲೆ ಪಾಪಮತಿ
ನಿಷ್ಕರುಣಿ ನಿರ್ಲಕ್ಷ್ಯ ಮಾನವ ಸಮಾಜ!

ಆದರ್ಶವಾದಿಗಳ ಶಿಲುಬೆಗೇರಿಸಿ ಅವರ
ಕನಸುಗಳ ಕುಚ್ಚಿ ಸ್ವಾರ್ಥಿಗಳಿಗುಣಿಸಿದೆ
ಜ್ಞಾನಯೋಗಿಯ ಕೈಗೆ ವಿಷದ ಬಟ್ಟಲ ಕೊಟ್ಟು
ನೀಚ ನರಪಾಲಕರ ಮನವ ತಣಿಸಿದೆ

ಧರ್ಮಗುರುಗಳ ತತ್ತ್ವಗಳ ರಕ್ತವನೆ ಹಿಂಡಿ
ಸ್ವಾರ್ಥಿಸನ್ಯಾಸಿಗಳ ಕಾವಿಬಟ್ಟೆಗೆ ತೊಡಿಸಿದೆ
ದೇವದೇವಿಯರನ್ನು ದನಗಳಂದದಿ ಮಾರಿ
ಷಂಡ ಪೂಜಾರಿಗಳ ಹೊಟ್ಟೆಗಿಡುವೆ

ಪಾಪಭೀರುಗಳಾದ ಮೂಕಜನತೆಯು ಕೊಂದು
ಪಂಚಮಾ ಕಿಗಳಿಗೆ ನರಕ್ಕ್ನ ಗೈವೆ
ಗುಡಿಗಾರರ ಹುಡಿಗಟ್ಟಿ ಹಿಡಿಭಂಡವಾಳಿಗರ
ಕೊರಳ ಸರಾಳಿಗೆ ಜನರ ಕರುಳ ಕೊಯ್ದು

ಸೂಳೆಗಳ ತೆರದಲ್ಲಿ ಸಿರಿವಂತರನು ಬೆಸಿ
ಬಡವರಸುಗಳ ರಸವ ಕುಡಿದು ತಣಿವೆ
ರಾಕ್ಷಸೀ ಲಾಲಸರ ನೀಚ ಪ್ರವೃತ್ತಿಯ ಸವದಿ
ಕೋಟಿ ಜೀವಿಗಳನ್ನು ಕವಿಕಡಿದು ತಣಿವೆ

ಹೊಟ್ಟೆಪಾಡಿ ಹಿಂಗಿಸಲು ಸ್ತ್ರೀಯು ಮಾರುವಳನ್ನು
ನೀಚ ಪಾಪಿರಳೆಂದು ನರಕಕ್ಕೆ ನೂಕಿ
ವೇದಾಂತವ ಪೇಳಿ ಕೆಲಸಮಾಡುವ ಕುಲಜೆ
ನಾಗರಿಕ ಸಂಪದದ ಮುದ್ದಿಸುವ ಸತಿ

ನಿನ್ನ ಅನ್ಯಾಯಗಳ ದೇವ ನಿಯಮಗಳೆಂದು
ನೀ ಸಮರ್ಥಿಸಿ ಜನವ ಮೋಸಗೊಳಿಸಿ
ಮನುಸಂಸ್ಕೃತ ವಿಷಮತೆಗೆ ಪ್ರಕೃತಿ ನಿಯಮದ ಬಣ್ಣ
ಬಳಿದು ಕರ್ಮದ ಕಂತೆ ಸಿದ್ಧಗೊಳಿಪೆ

ಭೂಮಿಕಸವೆಗನುಸರಿಸಿ ಬಣ್ಣ ಬೇರಾಗಿರಲು
ವರ್ಣದ್ವೇಷವ ಬೆಳೆಸಿ ಕೈಕೆ ಹಾಕುತಲಿರುವೆ
ಒಂದೆ ಮಣ್ಣಿನ ಸುತರ ಅಣ್ಣತಮ್ಮರ ತೆರದಿ
ಕಾಣದೆ ನಾಡುಗಳ ಗಡಿ ಹಾಕುತಿರುವೆ

ನಾಡುಭಾಷೆಯ ಜಗಳ ಧರ್ಮಪಂಥದ ಜಗಳ
ವರ್ಣವಂಶದ ಜಗಳ ಪುಟಗೊಳಿಸುತಿರುವೆ
ಪ್ರಕೃತಿಶಕ್ತಿಯ ಜಯಿಸಿ ಹುಸಿಪ್ರಚಾರವ ಬೆಳೆಸಿ
ದಿಟವನ್ನು ಸಟೆ ಸಟೆಯ ದಿಟಗೊಳಿಸುತಿರುವೆ

ಆತ್ಮಗಳ ಮಾರುತಿಹೆ ಪ್ರೀತಿಗಳ ತೂರುತಿಹೆ
ಬುದ್ಧಿಗಳ ದಲ್ಲಾಳಿ ಹಿಡಿಪೆ ಧನಕಾಗಿ
ಕಲೆ ನೀತಿ ಮತಶಾಸ್ತ್ರ ವಿಜ್ಞಾನ ವ್ಯಾಪಾರ
ಒಂದಾದರೂ ಬಾಳುತಿಹವೆ ಜನಕಾಗಿ ?

ಕೋಣಗಳ ಮುಂದೆಯೇ ಕಿನ್ನರಿಯ ಬಾರಿಸುತ
ಗಾಯಕನು ಹುಲುಬಾಳು ಹೊರೆಯ ಬೇಕು
ಕಾಗೆಗಳ ಬಳಗದಲಿ ಕೋಗಿಲೆಯು ತೆರನಲ್ಲಿ
ದಾತಹೇಳಿದ ಗೀತ ಕವಿ ಬರೆಯಬೇಕು

ಮತಶಾಸ್ತ್ರ ನೀತಿಗಳ ಸ್ಥಿತಿಯ ಬಣ್ಣಿಸಬೇಕೆ ?
ಕೊಳೆತು ನಾರುತಲಿಹವು ಹೆಣಗಳಂತೆ
ವಿಜ್ಞಾನ ದಳಪತಿಯ ದಾಸ್ಯದಲಿ ಕೊಳೆಯುತಿವೆ
ವ್ಯಾಪಾರಿ ಲಾಭಗುಳಿ, ಹಸಿದ ದನಗಳಂತೆ

ಮಾನವರು ಹೆಚ್ಚಿದರು ಮಾನವತೆ ಉಳಿದಿಲ್ಲ
ಹೀನತನ ದೀನತನ ದಾರಿದ್ರ್ಯವಳಿದಿಲ್ಲ.
ಸ್ವಾತಂತ್ರ್ಯ ಮೊಳೆದಿಲ್ಲ ಸುಖಶಾಂತಿ ಬೆಳೆದಿಲ್ಲ
ಮಾನವ ಪ್ರೇಮವೇ ನಮಗೆ ತಿಳಿದಿಲ್ಲ

ಶಾಸ್ತ್ರಗಳ ಮಾರ್ಪಡಿಸಿ ಸ್ವಾರ್ಥಕ್ಕೆ ತಕ್ಕಂತೆ
ಆರ್ತರನು ಸುಲಿಯುತಿಹ ಚಾಂಡಾಲಿಯೆ
ಕಟುಕರಿಗೆ ಸ್ವಾತಂತ್ರ್ಯ ಕೊಟ್ಟು ಸದಯರನೆಲ್ಲ
ಬಂಧನದಿ ಬಿಗಿದಿರುವೆ ಓ ಕಾಳಿಯೆ

ಇದಕ್ಕಾರು ಹೊಣೆ ಹೇಳು ಮಾನವ ಸಮಾಜವೆ
ಲಕ್ಷ ವರುಷದವರೆಗೆ ಸಹಿಸಿದೆವು ನಿನ್ನ
ಶತಮಾನ ಕಳೆದರೂ ಸ್ಥಿತಿ ಸುಧಾರಿಸಲಿಲ್ಲ
ಇನ್ನು ಸಹಿಸೆವು ನಾವು ಈ ವಿಧದಬನ್ನ !

ನೆನಪಿಡು ಸಮಾಜವೇ ನಿನ್ನ ನಿರ್ಲಕ್ಷ್ಯತನ
ಕೊನೆಗಾಣಲೇಬೇಕು ಸಾಗದಿನ್ನು !
ಇದ್ದುದನು ಎಂತೆಂತೊ ಉಳಿಸಿ ಬಾಳುವ ಹೊಂಚು
ನಡೆಯಲಾರದು ಇದಕೆ ಬೇಗ ಶರಣನ್ನು !

ಬಂಡಾಯ ಗುಡುಗುತಿದೆ ಮೂಕತೆಯ ಮೋಡದಲಿ
ಪ್ರತಿಭಟನೆ ಪುಟಿಯುತಿದೆ ಅಸ್ಥಿ ಪಂಜರದಿ
ಸೇಡು ಸಿಡಿದೇಳುತಿದೆ ನೊಂದುತಿಹ ಜನಮನದಿ
ಕ್ರಾಂತಿಕಿಡಿಗೆದರುತಿದೆ ನಿನ್ನ ಮಂದಿರದಿ

ದುಃಖಿತರ ನುಯ್ಲಿನಲಿ ಸಿಡಿಮದ್ದು ಹಾರುತಿದೆ
ದಾರಿದ್ರ್ಯದುಮ್ಮಳದಿ ಪ್ರಳಯ ಕಾದಿಹುದು
ಅಬಲೆಯರ ಕಣ್ಣೀರು ಕರೆಯುತಿಪೆ ಬೆಂಕಿಮಳೆ
ಹಸಿದ ಹೊಟ್ಟೆಯ ಬಿಸಿಗೆ ಭೂಮಿ ಕಾದಿಹುದು !

ಕುರಿಗಳನು ಕಾಯ್ವುದಕೆ ತೋಳಗಳನು ನಿಯಮಿಸಿದೆ
ಕುರಿ ತೋಳಗಳ ತಿನುವ ಕಾಲ ಬಂತು !
ದೀನತನ ಕಡೆಗೊಮ್ಮೆ ದಾನವತ್ವವ ಮೆಟ್ಟಿ
ಮಾನವತ್ವವ ತರುವ ಕಾಲಬಂತು !

ನಿನ್ನ ಸರಿಪಡಿಸಿಕೊ ಅನ್ಯಾಯಗಳ ಹೂಳು
ಎಲ್ಲರನು ಸಮನಾಗಿ ಕಾಣುಬೇಗ !
ಇಲ್ಲದಿರೆ ನಿನ್ನನ್ನೆ ಮುರಿದು ಕರಗಿಸಿ ಮತ್ತೆ
ನಮಗೆ ಬೇಕಾದಂತೆ ರೂಪಿಸುವೆವಾಗ !

——:——

## ಗಾಂಧಿ

ಪರಮ ಪೂಜ್ಯಕೆ ಪುರುಷರೂಪಿನಲಿ ಬಂದುದೋ ?
ಕರುಣೆ ಮೈವೆತ್ತುದೋ ? ಶಾಂತಿ ಸಂಪದಕೆಂದು -
ಗುರುವಿನಡಿ ಪೂವಾಯ್ತೋ ? ಸದ್ಗುಣವ್ರಾತವೇ ಮೈಗೆ
ವಸನವದಾಯಿತೋ ?

ವರಮಿತ್ತೈ ಭಾರತಕೆ, ಸಂತಸಕೆ, ಗೆಲುವಿಕೆಗೆ
ನರಸುಹರನಪ್ಪನೈ ಹೊಗಳೆ ಹೃದಯದ ತೆರದು
ಪರಮ ಸೌಜನ್ಯದಧಿದೇವಾತ್ಮ ಗಾಂಧಿಯನು ಸಂತತಂ
ಮೋದದಿಂದ ! ॥ ೧ ॥

---

## ಬಾ - ಅವರಿಗೆ -
### ಶತಕೋಟಿ ವಂದನಂ

ಅಮರಜೀವನದನುಲಲತೆಯಲಿನಿಪೂವಾಗಿ
ಪರಮ ಪಾವಿತ್ರ್ಯತೆಯ ಮೂರ್ತಿಗೂ ಮೇಲಾಗಿ
ಸರಲತೆಯ ಸೌಭಾಗ್ಯದಧಿಧಾತ್ರಿ ಚಿರವಾಗಿ
ವಿಮಲ ತೇಜೋರಾಶಿ ಬೆಳಗಲತಿ ಬೆಳಕಾಗಿ

ದೇವಾತ್ಮನಡಿಯಲ್ಲಿ ಸರಸಿಜೋದ್ಭವೆಯಾಗಿ
ಜನಮನದ ಮುಗಿಲಿನಲಿ ಧೃವತಾರೆ ದಿಟವಾಗಿ
ಅನುರಾಗಧವಳಗಿರಿ—ಗೌರಿಶಂಕರವಾಗಿ
ಧನ್ಯಾತ್ಮನುಸಿರಲ್ಲಿ ಭಾವದ್ವೈಸಿರಿಯಾಗಿ
ಓಪ್ರೋ ! ಮಹಾತ್ಮನ ಮಡದಿ ಮಂಗಳೆಯಾಗಿ
ವಿಶ್ವಜಿದ್ಯಾಗದುರು ಹೊಂಗಲಶದಡಿಯಾಗಿ
ಅಶ್ವಮೇಧದ ಕೋಟಿಗೈದಷ್ಟು ಹಿರಿದಾಗಿ
ಓ, ತಾಯಿ, ನಿಂತಿರುವೆ ಕೀರ್ತಿಮೇರೆಯ ನೀಗಿ !

ಧನ್ಯೆ ಕಸ್ತೂರ ಬಾ ಶತಕೋಟಿ ವಂದನಂ !
ಮಾನ್ಯೆ ಹರಸೌ ಬಾಳಿಗಿತ್ತು ನವಸ್ಪಂದನಂ !

---

# ಓ! ಪರಾತ್ಪರ ಶಕ್ತಿಯೇ!

ಬಡತನದ ಬೇಗೆಗೆನಿತದ್ಭುತಂ ಶಕ್ತಿ? ಸುಡು-
ಸುಡುತೆ ಮುಂಬರಿದು ಕೆಂಗಿಡಿ ಜ್ವಾಲೆಗಳನುಗುಳಿ
ಬಡಬನಂತಿಹೊ ರೌದ್ರ ರುದ್ರಾವತಾರದೊಳೇನು
ತಾಂಡವಗೈವುದೋ?

ಒಡಲಿನೀ ಕಿಚ್ಚೆಂದು ನಂದುವುದು? ಶಾಂತಿಗಡ
ಬಡವಂಗೆ ದೊರಕುವುದು? ವೈಗನಿತು ಬಟ್ಟೆಬರೆ-
ಹಿಡಿತುತ್ತು ತನ್ನದೆನ್ನುವುದೆಂದು ದೊರೆವುದೈ?
ಓ! ಪರಾತ್ಪರ ಶಕ್ತಿಯೇ?

---

# ಜನರು ಜನರ ಸ್ವರ್ಗದಲ್ಲಿ

ಬರುವುದೊಮ್ಮೆ ಬರುವುದು
ಬಾರದೆಂದು ಬಾರದು :
ಬರುವ ಬಿಡುವ ಭೂತಕಾಗಿ
ಇಂದು ಭಯವದೇಕದು ?

ಗೈವ ಗೈಮೆ ಸಾಗಲಿ
ಮೈ–ಮನವ ತುಂಬಲಿ !
ಸಾವು-ಬದುಕು-ನೋವು ನೂರು
ಹಾರಿಬರಲು ನಗುತಿರು !

ಕರಿದು ನೋಡ ಹೊಳೆವುದು !
ಬರಿದು ಕೈ ತುಂಬುದು !
ಸಿರಿಯು, ಪೂರ್ಣ ಸ್ವಾರ್ಥಕಾಗಿ
ಕುದಿದೊಡೇನು ದೊರೆವುದು ?

ಇಳೆಗೆ ನೀರು ಬರುವುದು
ಬೆಳೆಯ ತುಂಬ ತರುವುದು
ಜಳಕವಾಗ ಗಂಗೆಯಲ್ಲಿ
**ಜನರು ಜನರ ಸ್ವರ್ಗದಲ್ಲಿ**

ನಲಿದು ಕುಣಿದು ದಣಿವರು !
ಒಲಿದು ಉಲಿದು ತಣಿವರು !
ಇದೇ ಬೇಕು ಇಂದಿಗೆ !
ನಮ್ಮ ಮುಡಿವ ಮುಂದಿಗೆ !

——:——

## ಅದಕಂತಃ ತನನನ್ನ ಹಾಡೋಣ!

ಬಡತನ, ಸಿರಿತನ,
ಕಡೆತನಕುಳಿದಾವೇನ?
ಅದಕಂತಃ ತನನನ್ನ ಹಾಡೋಣ!
ಬಾಳನ್ನು ಬಂಗಾರ ಮಾಡೋಣ!
ಗೋಳಿನ ಸಂತೆಯ ಮರೆಯೋಣ! ೧.

ಸಾವು ನೋವಿನ ಸುಗ್ಗಿ
ಯಾವ ಬಾಳಿಗೆ ನುಗ್ಗಿ
ಕಣ್ಣೀರ ಕರೆವಂತೆ ಮಾಡಿಲ್ಲ?
'ಅಯ್ಯೋ!' ಎಂದಾರಸು ನುಡಿಸಿಲ್ಲ?
ಮುಯ್ಯೆಯೆ ಇದು? ಎಂದು ಅನಿಸಿಲ್ಲ? ೨.

ಅದು ಇಲ್ಲ; ಇದು ಇಲ್ಲ:
ಬದುಕಿಗೆ ಬೆಲೆ ಇಲ್ಲ
ಎಂದೆಂದು ಕೂಡುವ ದಿನವಲ್ಲ!
ಮನುಜನ ಶಕ್ತಿಯ ಮಿಾರಿಲ್ಲ!
ಸಾಹಸ ಜೀವಿಗೆ ಇದೆ ಬೆಲ್ಲ! ೩.

ಬಂದದ್ದು ಬರಲೆಂದು
ತಿಂದದ್ದೆ ಬಂತೆಂದು
ನಮ್ಮ ಹಾದಿಯ ನಾವು ಹಿಡಿಯೋಣ!
ಚಂದ ಚಂದ್ರಾಮನ್ನ ನೋಡೋಣ!
ಸುಂದರ ಸೃಷ್ಟಿಗೆ ಬಾಗೋಣ! ೪.

ಅವರೇನು ಅಂದಾರು ?
ಇವರೇನು ಅಂದಾರು ?
ಎಂದೆಂದು ಧ್ಯೇಯವ ಮರತೇವು ?
ಹಾಳುರಾಗವ ಸುತ್ತಿ ಹಾಡೇವು ?
ಬೀಳುವ ಭಾರಕೆ ಸಿಕ್ಕೇವು ? ೫.

ಹಾರಿಹೋಗುವ ಹಕ್ಕಿ
ಮೂರ ಕಾಣುವ ಚಿಕ್ಕಿ
ನಮ್ಮ ಜೀವಸುಖವ ಬೇಡ್ಯಾವು !
ತಮ್ಮ ಬಾಳಿನ ಕತೆಯ ಹೇಳ್ಯಾವು !
ಒಮ್ಮೆಗೆ ನಮ್ಮನ್ನ ಮರಸ್ಯಾವು ! ೬.

ಸುಖ-ದುಃಖ ಸರಿಸಮ
ಬಾಳಿದು ಘಮ-ಘಮ—
ಪೆಂಪೆಂಬ ಹೂವೆಂದು ತಿಳಿಯೋಣ !
ಅದರ ಸುವಾಸನೆ ಬೇಡೋಣ !
ಕಿತ್ತೊಮ್ಮೆ ತಲೆಯಲ್ಲಿ ಮುಡಿಯೋಣ ! ೭.

ಕಾಳಗ ಗೀಳಗ
ಕಾಲನ ಕಾಲಾಗ
ಮೇಲೆ ಕೆಳಗೆಲ್ಲಿ ಬೆಳ್ಳೊ ನಡೆದಿರಲಿ !
ಹೆಣ್ಗಂಡಿನನುರಾಗ ಚಿಮ್ಮಿರಲಿ !
ಕಣ್ಣಿಗೆ ಹೊಸಯುಗ ಹುಟ್ಟಿರಲಿ ! ೮.

ಶಾಂತಿಗೀಂತಿಯ ಮಂತ್ರ
ಕ್ರಾಂತಿಗೆ ಅತ್ತಂತ್ರ
ಅಂತಂಬೋರೀಕಡೆ ಕಣ್ತೆರಲಿ !
ಭ್ರಾಂತಿಯ ಸೆಣವನ್ನು ಹೂಳಿಡಲಿ !
ಯಂತ್ರಕೆ ಕೊನೆಗೊಮ್ಮೆ ಶರಣೆನ್ನಲಿ ! ೯.

ಮಾನವ ದಾನವ -
ನಾಗಿಹ ಕಾಲವ -
ಕಣ್ಣಾರೆ ಕಂಡೆವು ಈ ದಿನದಿ !
ಮುನ್ನೇನೊ ಎಂತೆಂಬ ಎದೆಗುದಿ !
ಕೈಚಾಚಿ ನಿಂತಿಹೆ ಕ್ರೂರವಿಧಿ ! ೧೦.

ಗೆಜ್ಜೆ ಕಾಲಿನ ಹೆಜ್ಜೆ
ವಜ್ಜೇನ ಸೀ ಹುಚ್ಚಿ
ತ್ರಿಂಘ ಧೈ ಧೈ ! ಅಂತಿನಲಿ !
ತಾಳಕ ನರಿಹೆಜ್ಜೆ ಬಳ್ಳಿರಲಿ !
ಬಾಳಿನ ಸಿರಿ ಸುಗ್ಗಿ ಸುರಿವಿರಲಿ ! ೧೧

ಗಂಡನ ಕಣ್ಣಿಗೆ
ಹೆಂಡತಿ ಚೆನ್ನಾಗೆ
ಕಹಿಯೆಲ್ಲ ಸಿಹಿಯಾಗಿ ರುಚಿಸಿತು !
ಹೊಸತು ಚೈತ್ರವನ ಮರೆಸಿತು !
ಕಂಪನ್ನು ತಣ್ಣಗೆ ಅನಿಸಿತು ! ೧೨

ಬಾಳೋಣ ನಗನಗ
ಗೋಳನು ಚಿಮ್ಮುತ
ಚೆಂದ ಚೆಂದದ ಕತೆಯ ಹೇಳುತ್ತ !
ನೊಂದವರ ಪಾಡೀಗೆ ಮರುಗುತ್ತ !
ನಂದನವನವನ್ನು ಕಾಣುತ್ತ ! ೧೩.

ಮಾಡಿ ಬಾಳಿನ ಸುಗ್ಗಿ
ನೋಡಿ ಜೀವವ ಹಿಗ್ಗಿ
ಮುಂದೆಯು ಬಾಳೋಣ ಸುಖದಿಂದ !
ಎಂದಾದರೇನಂತೆ ಜಗ ಚಂದ !
ಹಿಂದಕೆ ಸರಿಬೇಡ ನೀನಿಂದ ! ೧೪.

ಜೇಣ್ಣಿನ ಹೊನ್ನಿನ
ಮಣ್ಣಿನ ನಿಜವನ್ನ
ತಿಳಿದವರುಂಟೇನು ಜಗದಲ್ಲಿ ?
ಕಳವಳವಾಯಿತೆ ಮನದಲ್ಲಿ ?
ಹೆಣ್ಣಿಂದೆ ಜಗವಲ್ಲಿ ? ಕುಚವಲ್ಲಿ ! ೧೫.

ಏನಿದ್ದರೇನಂತೆ
ಸಾಕು ಜೀವನ ಚಿಂತೆ
ಕೈಯ್ಯಾಗ ಕೈಕೊಡು ನನ ಬಂಗಾರ !
ಮೈಯ್ಯಾಗ ಮೈನೆಡಲದು ಶೃಂಗಾರ !
ಆ ಬಾಳೆ ನಿಜವಾಗಿ ಬಹು ಸುಂದರ ! ೧೬.

———:———

# ನನ್ನ ದೀಪಾವಳಿಯ ಹದಿನಾಲ್ಕು ದೀಪಗಳು

ನನ್ನ ದೀಪಾವಳಿಯ ಹದಿನಾಲ್ಕು ದೀಪಗಳ
ಹೊನ್ನ ಬೆಳಕಲಿ ಬೆಳಗಿ ಹಬ್ಬ ಉಬ್ಬಿಲಿಗೈವ
ಮುನ್ನ ಕನ್ನಡಿಗರಿಗೆ ತಿಳಿಸಲಿಕೆ ಬರೆದನಿದ
ದೇಸಾಯಿ ದತ್ತಮೂರ್ತಿ

ತಡೆದವನೈ ಕನ್ನಡದಪಪ್ರಚಾರವ ತನ್ನ
ಸಿಡಿಸಿಡಿಲ ನುಡಿಯಿಂದ ಸಂಯುಕ್ತ ಕರ್ನಾಟ
ದಡಿಮುಡಿಯ ನೆಚ್ಚರಿಸಿ ಸೀಮೆಗರ ಬರೆದನೈ
ಮುದವೀಡು ಶ್ರೀಕೃಷ್ಣನು

ಕನ್ನಡದ ಅಧ್ಯಾತ್ಮಗುಡಿಗೆ ಕಳಸವನಿಟ್ಟ
ಸನ್ನತನು ಕ್ಷಮದದಮಾಕ್ಷಮು ಶಾಂತಮೂರುತಿಯು
ಕನ್ನಡದ ಬಾನ್‌ಬಯಲ ಬೆಳಗುವ ದಿವಾಕರನು
ರಾಮಸುತ ರಂಗನಾಥ

ಪಾವನೆಯು ತಾಯಿನಾಡಿನ ಸೇವೆಯೊಂದೇ ಗುರಿ
ಸಾವುನೋವುಗಳಿಗೂ ಅಳುಕದೆಯೆ ನೀಹಾಡಿ
ಪಾವಿತ್ರ್ಯಗೊಂಡ ರಾಮಾಯಣವನೊರೆದನೆ
ಶ್ರೀ ಸಾಲಿ ರಾಮಚಂದ್ರ

ತಾನುತಲೆದೂಗಿ ಜನತೆಯನು ತಲೆದೂಗಿಸುತ
ಆನಂದ ಕಂಡುಂಡು ಬಾಂಧವರಿಗುಣಿಸುತ್ತ
ತಾನೆತಾನದ ತರಂಗದ ಮೋಡಿ ಗಾರುಡಿಗ
ಅಂಬಿಕಾತನಯದತ್ತ

ಕಾಸ್ಪಡೀ ಕರ್ಣಕಟು ಎಂಬುವದಕೆ ಅರದಾ
ತಾನೆ ಕೃತಿಯಿಂ ಒಡೆದು ಆಹ ಕನ್ನಡದಿಂಪು
ಏನು ಸವಿ ಎಂದು ಮನಗಂಡು ಮನಗಾಣಿಸಿದ
ಬೆಟ್ಟಗೆರೆ ಕೃಷ್ಣಶರ್ಮ

ತನ್ನ ತರ್ಕದ ಹಿಡಿದು ಬುದ್ಧಿಯೊರೆಗಲ್ಲಿನಲಿ
ಚೆನ್ನಾಗಿ ಶಬ್ದಗಳ ತಿಕ್ಕಿ ಹೊಸಹೊಸ ಭಾವ
ವನ್ನು ಹೊರಡಿಸಿ ಚುಚ್ಚು ನಗೆ ಜೀಕದಲಿ ಸಲಿವ
ನಗೆಗಾರ ಶ್ರೀರಂಗನು

ಕಾಳರಾತ್ರಿಯ ಕಳೆದು ಜ್ಞಾನಬೆಳಕನು ತೀಳಿದು
ಬಾಳುವೆಗೆ ಸರಿಯಾಗಿ ನನ್ನ ನಲ್ಲನ ಕಂಡು
ಏನು ಬೆಳಗಿನ ಜೀಕದಾ ತಿಳಿನಗೆನಗುತ
ನಿಂತಿಹನು ಮಧುರ ಚೆನ್ನ

ಅತಿ ನಿಗರ್ವಿಯು ಪ್ರೇಮಯುತ ಶ್ರೀ ಸರ
ಸ್ವತಿಯರಿಬ್ಬರಗು ನಚ್ಚಿನವ ಕನ್ನಡ ಮೊದಲ
ಕತೆಗಾರ ಶ್ರೀಮಾಸ್ತಿ ವೇಂಕಟಯ್ಯಂಗಾರ
ಸುಬ್ಬಣ್ಣನ ಶ್ರೀನಿವಾಸ.

ಹಿತವಾಗಿ ಮಾತಾಡಿ, ಜನಮನವ ಮಿದುಮಾಡಿ
ಧೃತಿಯಿಂದ ಕನ್ನಡದ ಬಾವುಟವ ಹಿಡಿದೆತ್ತಿ
ಮಂಗೀತ ಹಾಡಿದನು ಕನ್ನಡದ ಕರುಳೆ ಸರಿ
ಶ್ರೀಕಂಠ ಗುರುವರ್ಯನು.

ಮರೆಮೋಸಗಳ ಕಂಡು ಉರಿದುರಿದು ಬೀಳುವನು
ಸರುವ ಕಲೆಗಳನರಿತು ಬಾಲಪ್ರಪಂಚದಲಿ
ಮೆರೆಯುತಿಹ ಬಿಚ್ಚುಸತ್ಯದ ಬೇಹುಗಾರನೈ
ಶಿವರಾಮ ಕಾರಂತನು.

ಮಲೆನಾಡ ಕವಿ ಶಬ್ದ ಬ್ರಹ್ಮಗುಮ್ಮಟದಲ್ಲಿ
ಒಲಿದುಲಿಯುತಿಹನು ಶಬ್ದದ ಸಿರಿಯನೀಂಟಿಸುವ
ಕಲೆಯರಿತ ಸವಿಗಾರ ಕೊಳಲಪ್ರಿಯ ಧೀಮಂತ
ಕುಪ್ಪಳ್ಳಿ ಪುಟ್ಟಪ್ಪನು.

ಚುರುಕು ಬುದ್ಧಿಯ ಹುಟ್ಟುಕವಿ ಸತ್ತಿವರುಷದಲಿ
ಚುರುಕು ಚೂರುಗಳಿಂದ ಚುರುಕ ಜನದಲಿ ಬಿತ್ತಿ
ಚುರುಕ ಕನ್ನಡಕಿತ್ತು ಯೆಂದಕುಡುಕ ರತ್ನನಿಂ
ಮೆರೆಯುತಿಹ ರಾಜರತ್ನ.

ಉದಯರಾಗವ ಹಾಡಿ, ಸಂಧ್ಯಾರಾಗವ ನೋಡಿ
ಕುದಿಕುದಿವ ಹೆಣ್ಣು ಜೀವ ಯಾತ್ರೆ ಚಿತ್ರಿಸುತ
ಬದಿಗೆಳೆಯೆ ಹಳೆಯ ಕೊಳಕೆಲ್ಲವನು ನಡುಕಟ್ಟಿ
ನಿಂದ ಅ. ನ. ಕೃಷ್ಣರಾಯ.

ಮೊದಲ ಮನೆಮಾತ ಬಳಕೆಲಿತಂದು ನಾಟಕದಿ
ಮೊದಲು ಮನೆಚಿತ್ರಗಳ ರಂಗಭೂಮಿಲಿ ತಂದ
ಮೊದಲ ನಾಟಕಕಾರ ಕಟುಹಾಸ್ಯಗಾರನವ
ಹೊಂರೂಲ ಕೈಲಾಸಂ.

———:———

# ಕ್ರಾಂತಿ ಧೀರಾ

ಗಳಿಗೆ ಇದೇ ಏರೋ ಧೀರಾ
ಹನಿಹನಿ ಹನಿಹನಿ ಧಾರಾಕಾರಾ
ಬಾನಿಗು ಭೂಮಿಗು ಏಕ ಕಾರಾ
ಬಳಿಗೆ ಹೆಣೆದಿದೆ ಪುಟ್ಟಾಪೂರಾ
ಗಳಿಗೆ ಇದೇ ಏರೋ ಧೀರಾ ೧

ತುಂಬಲೀ, ಹೊರಸೂಸಲಿ, ಆ ಹೊಳೆ, ತೊರೆ
ಕೋಡಿಯೊಡೆಯಲ್ಕೆ ಬಿಡು ಆ ಕೊಳಕೆರೆ
ಹರುಲತೆ ಮನೆಮಠ ಕಂಬನಿ ಸುರಿಸಿರೆ
ಗಳಿಗೆ ಇದೇ ಏರೋ ಧೀರಾ ೨

ಇಲ್ಲಿ, ಅಲ್ಲಿ, ಎಲ್ಲೆಲ್ಲಿಯು ನೀರು
ಕೊನೆಯಾಸರವದಳಿದೆ ಮುನ್ನೀರು
ನಿನ್ನಯ ನೆಲೆ ನೀ ಸಾರಲು ಹೋರು
ಗಳಿಗೆ ಇದೇ ಏರೋ ಧೀರಾ ೩

ಹನಿಹನಿ ಸೋಪಾನವ ನೀ ಹತ್ತಿ
ಮಿಂಚಹಿಡಿದು ಆ ಕಪ್ಪನು ಕೆತ್ತಿ
ಗುಡುಗಿನೊಡಲ ಸಿಡಿಮುಗಿಲನು ಎತ್ತಿ
ಗಳಿಗೆ ಇದೇ ಏರೋ ಧೀರಾ ೪

ಕಾಣುತ ಬಾನಿನ ನೀಲಿಮ ಕಾಂತಿ
"ತತ್ವಮಸಿ"ಯ ಸಿರಿತೇಜದ ಶಾಂತಿ
ಚಿರಕಾಲವು ನಡೆಯಲಿ ಈ ಕ್ರಾಂತಿ
ಗಳಿಗೆ ಇದೇ ಏರೋ ಧೀರಾ ೫

—:—

# ನೀರೆ!

೧

ಮಾಟ ಮಾಟ ಮೈ ಬಳುಕಿಸುತ್ತ
ತುಟಿ ಕಣ್ಣ ತುಂಬಿ ತುಳು ಪುಳುಕಿಸುತ್ತ
ಮಿದುಗಲ್ಲ ಮುಗುಳುನಗೆ ಅರಳಿಸುತ್ತ
ಎಳೆದೋಳ ಕೊರಳ ನೀ ಹೊರಳಿಸುತ್ತ
ಬಳಿಸಾರೆ ಬಾರೆ ನೀರೆ,
ಸಂ-ಸಾರ ಸಫಲತೆಯ ತೋರೆ!

೨

ಹಿತಮಿತದಿ ನಲುಮೆ ನುಡಿ ಉಲಿದು ಉಲಿದು
ಜತೆ ಜತೆಗೆ ಜತೆಯು ಹಿತ ನೀಡಿ ನಲಿದು
ಮೈ ಎರಡು ಉಸಿರು ಒಂದೆಂದು ಬಲಿದು
ಬಿಗಿತಾಗಿ, ನೂಗಿ ಜೀವನದಿ ಸಾಗಲಿದು
ನೀಡೆ ನೆರವ ನೀರೆ,
ದಡ- ಎರಡು, ಜೀವನವು ಮಾರೆ!

೩

ಹರೆ ಹುಚ್ಚು ದಿಗಂತಕೆ ಚಾಚುತಿರಲು
ಮೈ ಸೊಕ್ಕು ದಿಕ್ಕುಗಳ ಬಾಚುತಿರಲು
ಬಗೆ ಹಕ್ಕಿ ರೆಕ್ಕೆಗಳ ಬಡಿಯುತಿರಲು
ಈಜೀವ ಆಸರಕೆ ಮಿಡಿಯುತಿರಲು
ಕೊಡು, ಕೈಗೆ ಕೈಯ ನೀರೆ
ಈ ಬಾಳ ಕಾಳೆಗದಿ ಹೋರೆ!
ಬಳಿ ಸಾರಿ ಬಾರೆ ನೀರೆ!

---

# ಶಿವನೇ ಬಲ್ಲ!

ಪ್ರಾಯವಿದ್ದೂ ತೆರವೋ ಬಸಿರು
ಕಾಯವಿದ್ದೂ ಕಾವೋ ಉಸಿರು
ಮಾಯೆಯಿದ್ದೂ ಕಣ್ಣೋ ಹಸಿರು
ಬಾಯಿ ಇದ್ದೂ ದನಿಯೇ ಕೊಸರು

ವಾಣಿಯಿದ್ದೂ ಮುನಿಸೋ ಶ್ರೀಯು
ವೀರವಿದ್ದೂ ಕನಸೋ ಧೀಯು
ತಿಳಿಯಲಾರೆ ಯಾವದೊ ಕ್ರೈಯು
ನಡೆಸುತಿಹುದು ನಡೆವಿದೆ ವ್ಯೈಯು ೨

ಶ್ರದ್ಧೆಯಿದ್ದೂ ಬರಿದೋ ತಂತ್ರ
ಮನಸ್ಸು ಇದ್ದೂ ಮರೆವೋ ಜಪವು
ದೇವನಿದ್ದೂ ಈ ಅನ್ಯಾಯ
ನಡೆವೆ ನಡೆವಿದೆ ಯಾವ ನ್ಯಾಯ? ೩

ದೇಶಕಾಲಕೆ ಬೇಕೋ ಥಳಕು
ನಾಸ್ತಿ ಆಸ್ತಿಯ ಮಾಡೋ ಬಳಕು
ಇಲ್ಲದಿದ್ದರೂ ಬುದ್ಧಿಯ ಬೆಳಕು
ನಡೆದಿವೆ ಈ ಜಗ ತಳಕು ಮುಳಕು ೪

ಬಡವನಿದ್ದೂ ಬಾಯಿ ಇರಲಿ!
ಕಡವನಿದ್ದೂ ದಯೆಯು ಬರಲಿ!
"ರೊಟ್ಟಿ ಕಾರ" "ಬ್ಯಾಳಿ ಬೆಲ್ಲ"
ಏಕವೆಂದೋ ಶಿವನೇ ಬಲ್ಲ! ೫

---

# ಗುಟ್ಟು

೧

ಗಳ್ಸೋದೆಲ್ಲಾ ಗಳ್ಸಕಾದ್ರೆ
ಬಳ್ಸಾಕೆಲ್ಲಿಂದ್ ತರ್ತಿ ?
ಬೀಜ ಬಿತ್ತೋದ್ ಬೀಜಕ್ಕಾದ್ರೆ
ಹೊಟ್ಗೆಲ್ಲಿಂದ ಭರ್ತಿ ?

೨

"ಕಲಾಕ್ಕಂತ ಕಲಾದ್ ಸೇವೆ"
ಮನ್ಶಾ ಕಲಾದ್ ಮೂರ್ತಿ
ಕಲಾ, ಕಲಾ ಅಂತಿದ್ರೂನೆ
ಯಾರಿಗ್ ಬೇಕೋ ಕೀರ್ತಿ ?

೩

ಅದಕ್ಕಾಗ್ ಅದು ಇದಕ್ಕಾಗ್ ಇದು
ಎಲ್ಲಾ ಶಬ್ದದ್ ಜಾಲಾ
ಹೊಟ್ಟೇಗ್ ಬಟ್ಟೇಗ್ ಅಮ್ದಾನಿದ್ರೆ
ಅಲ್ವಾ ಕಳಿಯೋದ್ ಕಾಲಾ

೪

ಗ್ನಾನಾ ಕೊಟ್ರೆ ಮಾನಾ ತಾನೇ
ಬಂದ್ ಬರ್ತೈತೇಳು
ಹೊಟ್ಟೇಗ್ ಹಿಟ್ಟು ಎಲ್ಲಿಂದ್ ತರ್ತಿ
ರಟ್ಟೆ ಮುರ್ದು ಬಾಳು

೫

ಖರೇ ಹಸ್ವಿಗನ್ನ ! ಬಿಸ್ಲು
ಮಳೇಗ್ ಮೈಮ್ಯಾಗಂಗಿ
ಒಪ್ತಿ ಹೀನಾ ತಿಳಿಯಾಕ್ ಬುದ್ಧಿ
ಕುಡಿಯೋದೆಲ್ಲಾ ಗಂಗಿ !

೬

ಹಳ್ಳೀ ಕೆಂಚನ್ನ್ ಸುಕಾತ್ರುಪ್ತಿ
ಬೆಳ್ಳನ್ ಜನಕೆಲ್ಲ್ ಐತಿ
ಹೊರಗಿನ್ ಹೊಳಪಿನ್ ಬಿಸಿಲ್ಗುದ್ರಿ
ತಕತ್ತೈ ಅಂತ್ತೈತಿ

೭

ಬುದ್ಧೀಲ್ ವ್ಯೈಲೇ ದುಡ್ಡುಗಳ್ಸಿ
ಪಕ್ಕ್ದೋರ್‍ಗ್ನೂ ಕೊಟ್ಟು
ಸಂತೋಸ್ದಿಂದಾ ಇರೋದಂದ್ರೆ
ಕರ್ಮದ್ ಯೋಗದ್ ಗುಟ್ಟು.

---

## ಬಾ ಒಸ್ರ್ ಮ್ಯೆ ಕೊಡವಿ !

೧

ಬಡತನದಾಗಿನ್ ಬಾಳೀವಂದ್ರೆ
ಮುಳ್ಳಿನ್ ಮ್ಯಾಗ್ ನಡದಂಗೆ
ಸಿಂಯನ್ ದವಡ್ಯಾಗ್ ಕುತಿಗಿಕೊಟ್ಟು
ಬಾಳಾಕ್ ಬಗೆದಂಗೆ

೨

ಮದ್ಯಾನ್‌ದೂಟದ ಚಿಂತಿ ಬೇರೆ
ಹರಸದ್ ಕುಡೀಸ್ ಸುಟ್ಟು
ಕಮರೀಸ್ ಬಿಡತೈತ್ ಮಾನಾಗ್ಯಾನಾ
ಓ ಹೋಕ್ಕೈತೆ ಬಿಟ್ಟು

೩

ಒಟ್ಯಾನ್ ಬೆಂಕಿ ಮಿದಡಿನ್ ತಿಂದು
ಅಃಬ್ ಅಂತ್ ತೇಗ್ತೈತೆ
ದುಡ್ಡಿನ್ ದೆವ್ವ ಬಡವನ್ ತೆಲಿಮ್ಯಾಗ್
ತಕತ್ತೈ ಅಂತೈತೆ

೪

ನೀರಾಸ್ ಕುಲಿಮೀಲ್ ಯೆಂಡ್ತಿಮಕ್ಳು
ತಾನೂ ಕುದೀತಾರೆ !
ತಮ್ದಂಬುಟೇ ಜಗದಾಗಿಲ್ಲಂತ್
ಚೀರ್ಯಾಡ್ ಸಾಯ್ತಾರೆ !

೫

ಬಡಕೊಂಡ್ ಬಡತನ್ ಭೂತಾಬಿಡ್ಸಾಕ್
ಯಾವ ದೇವಗೂ ಬರ್ದು
ಹುಚ್‌ನಾಯೀಗೆ ಕಲ್ಲೊಡೆದಂಗೆ
ಹೊಡಿತಾರ್ ನಿಂತ್ ಸರ್ದು !

೬

ಸುಖದಾಗ್ ಬಂದೋಗ್ ತಿಂದುಂಡವ್ರು
ಹೊಳ್ಳಿನೋಡಾಕೂ ಸಿಗವಲ್ರು
ಎದುರೀಗ್ ಬಂದ್ರು ಮೊಖಾನ್ ತಿರ್ಗಿಸ್
ನೋಡ್ದವರಾಂಗೇ ಇರಬಲ್ರು !

೭

ಬಡವನ್ 'ಬಾ' ಅಂತ ಕರೆಯೋತಾಕತ್
ಜಗದಾಗ್ ಯಾವ್ನಿಗ್ಗೈತೆ
ಪಿಡಗಿನ್ ನಡಬರಕ್ ಬಾಳೇ ಮಾಡೋಟ್
ನೀರೋಗ್ ಇರತ್ತೈತೆ !

೮

ಮೂರೂ ಹೊತ್ತು ದೇವರ್ ನೆಪ್ಪು
ಅಪ್ರೂ ಕಾಯೋರ್‍ಯಾರು ?
ಬಡವನ್ ಅಂಗೇ ತಾಕತ್ ಹೆಪ್ಪಾಗ್
ತಣ್ಣಾಗಗವ್ನೆ ದೇವರು ?

೯

ಬಡತನ್ ಕುಲಿಮೀಂದ್ ಕಬ್ಣ ತೆಗೆದು
ನೀರನ್ ಕುಡ್ಸೋ ಕಮ್ಮಾರಾ
ಎಲ್ಲಿದ್ದೀಯೋ ನೋಡ್ ಕಣ್ತೆರದು
ಬೆಂಕಿ ಆಪ್ಸಾಕ್ ನೀಬಾರಾ

೧೦

ಕುಲಿಮ್ಯಾನ್ ಕಬ್ಣ ಹೊರಾಕ್ಕೆಳೆದು
ನೀರ್ಕುಡಿಸಿ ಬಡ್ದು ಒಡವಿ
ಮಾಡೋ ಅಂತಾ ಕಮ್ಮಾರ್ ದೇವ್ರು
ಬಾ ಒಮ್ಮೆ ಮೈ ಕೊಡವಿ !

---

ಷಡ್ವೈರಿಯಂತ್ರಹಾರು
ನಾಡವೇಹದಲವರು
ನಿಷ್ಠೆಯಿಂ ಗೆಲ್ಲು
ವಶೀಕರಿಸದಿರೆ ಕೊಲ್ಲು

ದಸ್ಯು ತಾ ಜಯಿಸುವುದೆ
ಮೋಕ್ಷ ಮಾರ್ಗದ ಮಂತ್ರ
ನಮ್ಮವರ ಗೆಲ್ಲುವಯೆ
ಸಿಗದು ಸ್ವಾತಂತ್ರ್ಯ

—— : ——

## ಕಾರ್ಲ್ ಮಾರ್ಕ್ಸ್

ವಿಜ್ಞಾನ ಅರಿವು ಒದವಿಪ ಬರಿಯ ಸಾಧನವಲ್ಲ!
ಜ್ಞಾನಿ ನಿಜಮನ ತಣಿಸ ಆಡುಮಾಟವು ಅಲ್ಲ!
ಪ್ರಕೃತಿ ಗರ್ಭವನೊಡೆದು ವಿವಿಧ ಕಾಲದಿ ಜಗವು,
ಹೊಸ ರೂಪಾಂತರವ ತಾಳ್ದು ಸೃಷ್ಟಿಯ ಗುಟ್ಟು,
ಮೀರಿ ಬಾಹ್ಯದ ಹಿಂದೆ ಅಡಗಿರುವ ವಿದ್ಯುತ್-
ತೇಜಮಯಿ, ಕಾಂತಿ-ಮಯಿ ಶಕ್ತಿಯನು ಮಿಂಚಿಸುವ,
ಸಬಲ ಸಚೇತನದ ಕ್ರಾಂತಿಪೂರ್ಣ "ವಿಕಾಸ-
ಶಕ್ತಿ"ಯನು ಕಂಡ ವಿಜ್ಞಾನಿ ಡಾರ್ವಿನನಂತೆ! —

ಪ್ರಕೃತಿ ಬಸಿರ ಬಗೆವ ವಿಜ್ಞಾನಿ ತೆರದ ಅಸಿ,
ಯಂತ್ರದಲಿ ಗಳಿಸುತಿಹ "ಅತಿರಿಕ್ತ-ಮೌಲ್ಯ"ದಲಿ,
ಜಗದ ದುಡಿಮೆಯ ಫಲದ, ವಿನಿಮಯದ ನಿಯಮವನೇ
ಕೃತಿಯಾಗಿ ಬದುಕಿನ ಬಡಬಾಗ್ನಿ ಗುಡುಗುತಿದೆ!
ಜಗಕಿತ್ತೆ ವಿಶ್ವತೇಜ ತೇಜಮಯಿ ಕ್ರಾಂತಿಯನು!
ನವತೆ ನವನವತೆಯ ಜಗವ ಹೊಸ-ಸೃಷ್ಟಿ ರೂಪವನು!

—:—

ಗೆಲ್ಲನೇಂ ಯುಗಪುರುಷ, ಬಾರದೇಂ ಸಿರಿ-ಹರುಷ
ಬಿದ್ದ ಜನತೆಯು ಎದ್ದು ಕಡಿಯೆ ಬೇಡಿ:
ಹೀನ ಜೀವನವಾಗಿ, ಪರುಷ ಎಲ್ಲರದಾಗಿ,
ಹೊಸ ಜಗದ ಹಾದಿಸಲಿ, ಇದೆ ಕ್ರಾಂತಿನಾಡಿ!
ಅಮರಸ್ವರ್ಗವೆ ಆಯ್ತು ಮುನ್ನಿನಾ ಮರುಭೂಮಿ
ಬೆಳೆದುವಲ್ಲಿ ಕಬ್ಬು, ಪಿಥ ಕೆಂಪುಹೂವು.
ಹೊಸಯುಗದ ಹೊಸ ರವಿಯು, ಹುಟ್ಟಿದೊಡೆ ಅರಳದೇ,
ಕೆಸರಿನಲಿ, ಬಿಡುಗಡೆಯ ತಾವರೆಯ ಹೂವು!

---

# ಸರ್ವಜ್ಞನ ವಚನಗಳು

## ಇತಿಹಾಸದ ಸ್ವರೂಪ

### ಹಿಂದು–ಇಂದು–ಮುಂದು

ಬುದ್ಧಿ ಯೊಂದರಿಂ ಬಂದುದು | ಬುದ್ಧನಾ ಕದ್ದಿಯದು
ಬುದ್ಧಿ ಯೊಪ್ಪದಡೆ ಬುದ್ಧನಂ | ಸಹ ನಂಬ.
ಬುದ್ಧನಿಂತೆಂದ ಸರ್ವಜ್ಞ ||೧||

ನನ್ನದೆಲ್ಲದು ಮೋಗು | ನಿನ್ನದೆಲ್ಲದು ಕೇಳು
ನನ್ನವೇ ಬಾಳಿ ನಿನ್ನದಳಿ | ಯುತಿಸ್ತನ
ರನ್ನ ಕೊಳ್ಳಿಗ್ಯಾ, ಸರ್ವಜ್ಞ ||೨||

ಹಿಂದಿನಾ ಚಂದದಿಂ | ಅಂಧನಾದವ ಮಂದ
ಹಿಂದಿನಂದನನಿಂದು ಮಿಗಲಾದ ಮುಂದು
ಹಿಂದಿನಿಂ ಚಂದ, ಸರ್ವಜ್ಞ ||೩||

ಹಿಂದು-ಮತಿ ಬಾಳುವನು | ತಂದೆಯಾ ನೆರಳಾಗಿ
ಮುಂದುಮತಿ ತಂದೆಯಂ ಮೀರಿ ಆಗಸಂ
ಮುಂದರಿವನಯ್ಯ ಸರ್ವಜ್ಞ ||೪||

ಕಿರಿಯನಿಂ ಹಿರಿಯನೇ | ಸಿರಿದಾಗಿ ಒಲ್ಲನೇ ?
ಬರಲಾರದೇ ಹಾದ ಹಿಂದು ಮುಂದರಿತ
ಕಿರಿಯನೇ ಜಾಣ, ಸರ್ವಜ್ಞ ||೫||

ಹಿಂದಿರುಗಿ ನೋಡುತ್ತಂ | ಮುಂದುವರಿಯುವ ಜಾಣ
ಹಿಂದಿನಾ ಕುಂದುಗಳ್ ಗುರುಗಳಲ್ಲನೇ
ಮುಂದುವರಿವಂಗೆ ಸರ್ವಜ್ಞ ||೬||

ಮುತ್ತಿನಾ ಮೊಡ್ಡಪ್ಪ | ಬತ್ತವೇ ಕೇಡೆಮಗೆ
ಗೊಡ್ಡುಬಡ್ಡಿಯ ಬಿಟ್ಟು ದುಡಿಮೆಯಿಂದುಣ್ಣುವ
ದೊಡ್ಡಪ್ಪ ಬೇಕು, ಮರ್ಮಜ್ಞ ||೩೧||

ರಟ್ಟೆಯಿಂ ದುಡಿವರಾ ಹೊಟ್ಟೆ ತುಂಬಲು ಬೇಕು
ಹೊಟ್ಟೆಬಟ್ಟೆಯು ಚಿಂತೆ ತಪ್ಪಿದಡೆ ನಾಡು
ಗಟ್ಟಿ ನೋಡೆಂದ, ಮರ್ಮಜ್ಞ ||೩೨||

ತಗ್ಗು ದಿನ್ನೆಗಳಳಿಯೆ | ಮುಗ್ಗು ಹೋಗಲು ಬೇಕು
ಹಿಗ್ಗು ಕುಗ್ಗುಗಳಡಗಿಡಡೆ ನಾಡ ಸಿರಿಯು
ಸುಗ್ಗಿ ನೋಡೆಂದ, ಮರ್ಮಜ್ಞ ||೩೩||

ಆಳಾಗಿ ಬಾಳುವನು | ಹಾಳಾಗದಿರುವನೇ
ಕೇಳು ಮೇಲೆಂಬ ತೋಳನಾ ತಳ್ಳಿದೊಡೆ
ಏಳುವುದು ನಾಡು, ಮರ್ಮಜ್ಞ. ||೩೪||

ಎಣ್ಣೆ ಬಡವರ ಪಾಲು | ಬೆಣ್ಣೆ ಧನಿಕರ ಪಾಲು
ಕಣ್ಣು ತೆರೆವಡೆ ನಾಡಿಗರೆಲ್ಲ ಬೆಣ್ಣೆ
ಕಾಣುವರು ನೋಡು, ಮರ್ಮಜ್ಞ ||೩೫||

## ದಾಂಪತ್ಯ ಜೀವನ

ಮದುವೆಯಾ ಬಿಗಿಯಕ್ಕೆ | ಹೃದಯದಾ ಹುರಿಬೇಕು
ಹೃದಯ ಮಿಶ್ರವೆ ಕೂಡಿದರೆ ಜೋಡಿ ಬಾಳು
ಹದಗೇಡಿ ನೋಡು. ಮರ್ಮಜ್ಞ. ||೩೬||

ಅಕ್ಕರದ ಹೆಂಡತಿಗೆ | ಸಕ್ಕರೆಯು ಸಿಹಿ ನೋಡು
ಅಕ್ಕರವಡಗಿದಾ ಹೆಣ್ಣು ವಿಷವನೇ
ಮುಕ್ಕೆ ಕಹಿಯೆಂದ, ಮರ್ಮಜ್ಞ ||೩೭||

ಪ್ರೀತಿಯಾ ಗೋಪುರಕೆ | ನೀತಿಯೇ ತಳಹದಿಯು
ನೀತಿ ಸಡಿಲಾದೊಡೆ ಪ್ರೀತಿಯುರುಳುವುದು
ತತ್ತರಿಸಿ ನೋಡು. ಮರ್ಮಜ್ಞ. ||೩೮||

ಕಲ್ಲಿನಾ ಬಸವಂಗೆ । ಹುಲ್ಲುಹಡಿಗೆಯು ನೀಡಿ
ಹುಲ್ಲು ಚಲ್ಲರು ಜೀವದಾ ಸಂಡಿಗಳಟಿ
ಹೊಲ್ಲದಾ ನೋಡು, ಸರ್ವಜ್ಞ. ॥೩೬॥

ನೀಗದಾ ನಡೆಗಟ್ಟು । ಸೋಗಿನಾ ನಿಜಪುಟ್ಟು
ಭೋಗದಾಶೆಯನೊತ್ತಿ ಯತಿಯೆಂದು ಮೆರೆವ
ಸೋಗಿಯೋ ನೋಡು, ಸರ್ವಜ್ಞ. ॥೩೭॥

ಹೆಂಡತಿಯ ಬಣ್ಣಾಕಿ ನಾಡ ನಲಿಸುವುದುಂಟೆ ?
ಹೆಂಡರಿಂದಗಲಿದಾ ಲೋಕಸೇವಕರು
ನಾಡಿನಾ ಸಿಡುಗು, ಸರ್ವಜ್ಞ. ॥೩೮॥

ಶಿವಚಿಂತೆ ಬೇಡಣ್ಣ । ಭವಚಿಂತೆ ಬೇಕೆಮಗೆ
ಭವಭೋಗ ಕಾರಣ್ಣ. ಪರಮಾತ್ಮನಾ
ಭವನಾಶನೈಶ್ವರ್ಯ, ಸರ್ವಜ್ಞ. ॥೩೯॥

ಮುಕ್ತಿ ಬೇಡೆಮಗಣ್ಣ । ಶಕ್ತಿ ಬೇಕೆಮಗಿಲ್ಲಿ
ಶಕ್ತಿ ಬಂದೊಡೆ ಮುಕ್ತಿ ಕೈಯ್ಯಾನ ಶಕ್ತಿಯೇ
ಮುಕ್ತಿ ಕೇಳೆಂದ, ಸರ್ವಜ್ಞ. ॥೪೦॥

ಯುದ್ಧವನಳಿಸಣ್ಣಾ । ಬುದ್ಧಿಯಿಂ ಜಳಿಸಣ್ಣಾ
ಶುದ್ಧಿಯಂತಾಳಿ ಕೆಲಸದೋಳೆಯಣ್ಣಾ
ಬುದ್ಧಿ ಯೋಗಿಸೀ, ಸರ್ವಜ್ಞ. ॥೪೧॥

ಬುದ್ಧಿಯಿಂ ಮೇಗಿಲ್ಲ । ಯುದ್ಧದಿಂ ಕೆಳಗಿಲ್ಲ
ಬುದ್ಧಿಯಿಂ ಗುರುವಿಲ್ಲ. ವಿಶ್ವದಾ ಬಂಧು
ಬುದ್ಧನಿಂದಿಲ್ಲ, ಸರ್ವಜ್ಞ. ॥೪೨॥

——:——

## ಇಕ್ಕುವಂ ನಮ್ಮೊಡಲ ಕೊಳ್ಳಿ !

೧

ನೆರವೀಯುತೆಮಗಿಲ್ಲ,
ದಯೆ ತೋರರವರಲ್ಲಿ,
ದುಷ್ಟರಿಷ್ಟದ ತೆರದಿ ಸಾಗುತಿದೆಯಿಲ್ಲಿ !
ನಮ್ಮ ಗತಿ ನಮಗಾಗಿ
ಮನದೊಳಗೆ ಮರುಮರುಗಿ
ಅಳಿಯುವುದೆ ನಮಗೆಲ್ಲ ಬಂದುದೆಲ್ಲ !

೨

ಒಳ್ಳವರು ದೊಡ್ಡವರು,
ಬಲ್ಲಿದರು ಕೆಟ್ಟವರು,
ನಾವೆಲ್ಲಿ ಬದುಕುವುದು ಸುಡುಗಾಡಿನಲ್ಲಿ !
ಇಲ್ಲಿರುವ ಸ್ವಾಮಿಗಳು
ಧನವಂತರಾಳುಗಳು
ಅಲ್ಲಿರುವ ದೇವನನು ಕಾಣೆ ಕಣ್ಣಿಲ್ಲ !

೩

ಹಿಡಿ ಅಶನ ಒಡಲಿಂಗೆ
ಇಲ್ಲದೆಯೆ ಕೂರಸಿಗೆ
ಸಿಕ್ಕು ಹುಡಿಯಾಗುತಿರೆ ನುಡಿಸುವವರಿಲ್ಲ !
ಎಲ್ಲರಿಗು ಕಾಣುವುದು
ನೀರೊಳಗೆ ಮುಳುಗುವುದು
'ಅಯ್ಯೊ ಪಾಪ', ಎಂದು ನುಡಿಸುವವರಿಲ್ಲ

೪

ನಾವು ಪಾಪಿಗಳಂತೆ
ಅದಕೆ ಈ ಗೋಳಂತೆ !
ಇದಕೆಲ್ಲ ಕಾರಣವು ಕರ್ಮವಂತೆ !

ಘೂರ್ಣವನು ಒಲ್ಲನದು,
ಸುಲಿಗೆಯಲಿ ಸುರಿತವರು,
ನಮ್ಮ ಹಸಿವೆಗೆ ಕೊಟ್ಟ ಮದ್ದಿದಲ್ಲಿ ?

೫

ಅದಕಾಗಿ ನಾವಿಂದು
ಒಂದೆಡೆಗೆ ನೆಲೆಸಿಂದು
ಪಾಪಪುಣ್ಯವನೆಲ್ಲ ಒಂದೆಡೆಗೆ ತಳ್ಳಿ !
ನಿರಪೇಯದವರಿರಲಿ,
ದಯೆತೋರದವರಿರಲಿ,
ಎಲ್ಲರಿಗು ಐಕ್ಯವಂ ಸಮ್ಮತಲಿ ಕೊಳ್ಳಿ !

೬

ಕರ್ಮನಿರ್ಮದ ಜಾಲ
ತಪ್ಪಿಸಲಾರದ ಕಾಲ
ಒಪತನದ ಭೀಕರದ ಮೋಸದಿನಲ್ಲಿ !
ರಕ್ತರತಾಬ್ಧಿಗಳಿಂದ
ನಮ್ಮ ಕಣ್ಣುಗಳಿಂದ,
ಬಿದ್ದನೀರ್ ಹರಿಯುತಿದೆ ಈ ರೂಪದಲ್ಲಿ !!

೭

ಪಾಪಿಗಳು ನಾವೆಂದು,
ನೋಡಬಾರದು ಎಂದು,
ತಾವಾಗಿ ಕಣ್ಣುಗಳನಿರಿದು ಕೊಂಡವರು !
ಎಲ್ಲರದ ಪ್ರಲಯದಲಿ
ಬಡಬಾಗ್ನಿಸುರಿಯಲ್ಲಿ
ನೀವು ಸ್ವರ್ಗವ ಸೇರಿ ಮುಕ್ತಿಯೊಂದುವರು !

## ಎಚ್ಚರಿಕೆ !

೧

ನಾವು ರಾಜರೆ ನಿಜವು
ತೊಳಲಿದರು ಪಾಸ್ಪದಲಿ !
ನಮ್ಮಗೊರೆದೊರೆಯಾರು ಬದುಕಿದ ರಾಜ ಫಲ ?
ಈ ರಾಜ್ಯ ಹೊಡೆತನವು
ಸಂಪೂರ್ಣನೆಮ್ಮದದು
ಬರಿಯಬೊಕ್ಕಸಖಾನು ಮಕುಟವಿಲ್ಲದ ರಾಜ ತಿಳಿದಿರಲಿ !

೨

ಬರಿಯ ರಾಜರೆ ನಾವು ?
ನಿಮಗಾಗಲೆ ನೋವು,
ನಾವು ಯೋಗೀಶ್ವರರು ಎಂಬುದನು ಕೇಳಿರೊಡೆ !
ಏಕೆಂದರಿದ ಕೇಳಿ :
ನಮಗಿಹುದದೇಂ ಹೇಳಿ ?
ಕಾಮಿನೀ ಕಾಂಚನವು ತಾವಾಗಿ ತೊರೆಯುವೊಡೆ !

೩

ಎನಿತೊ ಯೋಗೀಶ್ವರರು
ಸಾಧನೆಯ ಗೈದಿಹರು
ಈ ಸಿದ್ಧಿ ಪಡೆಯಲಿಕೆ ಎನಿತೆನಿಸಿತೊ ಕಾಲಂ !
ಇದೊಡೆಮ್ಮನು ನೋಡಿ !
ಹುಟ್ಟಿನಿಂದಲೆ ಕೂಡಿ
ಬಂದಿಹುದು ಈ ಪದವಿ ! ಅವರಿಗಿಂ ನಾವ್ ಮಿಗಿಲು

೪

ನಿರ್ಲಿಪ್ತರೂ ನಾವು
ನಮಗಿಲ್ಲ ಬಂಧನವು
ಕಾಮಕ್ರೋಧಗಳೆಂಬುವಿನಿತಿಲ್ಲ ಬಾನಿನಲಿ!
"ಭಿಕ್ಷೆಯಿಕ್ಕುವರಾವು
ಭಿಕ್ಷಾನ್ನ ತಿನ್ನುವರು"
ಎಂದು ಮುಖದೊಳು ನುಡಿಯೆ ಸಹಿಸುವೆವು ಶಾಂತಿಯಲಿ!

೫

ಈಗಳುಂ ನಾವಾರು
ಎಂಬುದಂ ಅರಿತಿಹಿರೋ?
ಜಗದೊಳಿಹ ಹಿರಿತನದಿ ಪ್ರತಿನಿಧಿಗಳಾವು!
ಅದರಿಂದ ಕೆಣಕದಿರಿ,
ನಮ್ಮವರ ಉರಿಸದಿರಿ!.
ಕೋಟಿ ಯುಗಗಳ ತಪದಿ ಸುಟ್ಟುಬಿಡುವೆವು ನಾವು!

೬

ಪ್ರಲಯದುಲ್ಕೆಯಂತೆ!
ನಮ್ಮ ತಪದುರಿಯಂತೆ!
ಸಾಟಿಗೀಡೆಯಿಲ್ಲ ಮೂರುಲೋಕದೊಳಿವಕೆ!
ಇಂದ್ರಗಿಂದ್ರರು ಎಲ್ಲ
ನವನಿಧಿಯ ಒಡೆಯರುಂ
ಸಿದ್ಧರಾಗಿರಿ ಬರುವ ಜ್ವಾಲೆಯನು ಅಪ್ಪಲಿಕೆ!

---

## ಓ ಏಳಿ! ಎದ್ದೇಳಿ! ಬನ್ನಿ ಮಾಡುವ ಧಾಳಿ!

ಸಿರಿಲತೆಯು ನಿಮುಟಿಕೆಗೆ
ನಮ್ಮ ದುಃಖಾಶ್ರುಗಳ
ಸುರಿದು ಇಂಗಿದುದೆಮ್ಮ ಕಣ್ಣೀರಿನೊರತೆ !
ಕಣ್ಣುಗಳು ಗುಳಿಬಿದ್ದು
ಮಸಣದಿಂ ನಾವೆದ್ದು
ಬಂದು ನಿಂತಿರುವೆವಾವ್ ಛಾಯೆಯಂತೆ ! ೧

ತಂಪಾಗಲಿಲ್ಲಿನಿತು
ಸಿರಿಲತೆಯ ಹಿರಿಸಾತೆ !
ನಮ್ಮ ರಕ್ತವನೆಲ್ಲ ಸುರಿಯಬೇಕಾಯ್ತು !
ಎಲುವು ತೊಗಲಿರಡನ್ನು
ಬಿಟ್ಟು ಮಿಕ್ಕದುದನು
ಸೆಳೆಯಿತೀಲತೆ! ನಾವು ಸಾಯಬೇಕಾಯ್ತು ೨

ಮಾನಮರ್ಯಾದೆಯನು,
ಲಜ್ಜೆ ನಯ ಶೀಲವನು,
(ಲೋಕವಭಿಮತಕೆಲ್ಲ ಹುಟ್ಟುಕುರುಡಾಗ)
ಒಂದಿನಿತು ಲಕ್ಷಿಸದೆ,
ಧನಿಕರೆನ್ನುವ ಹದ್ದು
ಆಸುವೃಕ್ಕೊಡಂ ಕೂಡ ಕೊಡುತಿದೆ ಮೇಲೆರಗಿ ! ೩

ಕಣ್ಣೀರು ಹರಿಹರಿದು
ಕಣ್ಣುಗಳು ಗುಳಿಬಿದ್ದು
ಮಾಂಸರಕ್ತವನೆಲ್ಲ ಸಿಸುಗೆ ಬಲಿಮಾಡಿ ;
ಓಡಾಡಲಳವಿರದೆ
ಬಿದ್ದುಕೊಂಡಿರುವೊಡೆ,
ಕೊಲ್ಲಲೆಂದೆರಗುವುದೆ ನರಮಾಂಸಭಕ್ಷಕರೆ ? ೪

೪

ನಿರ್ಲಿಪ್ತರೂ ನಾವು
ನಮಗಿಲ್ಲ ಬಂಧನವು
ಕಾಮಕ್ರೋಧಗಳೆಂಬುವಿನಿತಿಲ್ಲ ಬಾನಿನಲಿ !
"ಭಿಕ್ಷೆಯಿಕ್ಕುವರಾವು
ಭಿಕ್ಷಾನ್ನ ತಿನ್ನುವರು"
ಎಂದು ಮುಖದೊಳು ನುಡಿಯೆ ಸಹಿಸುವೆವು ಶಾಂತಿಯಲಿ !

೫

ಈಗಳುಂ ನಾವಾರು
ಎಂಬುದಂ ಅರಿತಿಹಿರೋ ?
ಜಗದೊಳಿಹ ಹಿರಿತನದ ಪ್ರತಿನಿಧಿಗಳಾವು !
ಆದರಿಂದ ಕೆಣಕದಿರಿ,
ನಮ್ಮವರ ಉರಿಸದಿರಿ !
ಕೋಟಿ ಯುಗಗಳ ತಪದಿ ಸುಟ್ಟುಬಿಡುವೆವು ನಾವು !

೬

ಪ್ರಳಯನಾಲ್ಗೆಯಂತೆ !
ನಮ್ಮ ತಪದುರಿಯಂತೆ !
ಸಾಟಿಗೀಟಿಯಿಲ್ಲ ಮೂರುಲೋಕದೊಳಗೆ !
ಇಂದ್ರಗಿಂದ್ರರು ಎಲ್ಲ
ನವನಿಧಿಯ ಒಡೆಯರುಂ
ಸಿದ್ಧರಾಗಿರಿ ಬರುವ ಜ್ವಾಲೆಯನು ಅಪ್ಪಲಿಕೆ !

---

## ಓ ಏಳಿ! ಎದ್ದೇಳಿ! ಬನ್ನಿ ಮಾಡುವ ಧಾಳಿ!

ಸಿರಿಲತೆಯು ನಿಮ್ಮಡಿಗಳಿಗೆ
ನಮ್ಮ ದುಃಖಾಶ್ರುಗಳ
ಸುರಿದು ಇಂಗಿಸುದೆಮ್ಮ ಕಣ್ಣೀರಿನೊರತೆ !
ಕಣ್ಣುಗಳು ಗುಳಿಬಿದ್ದು
ಮಸಣದಿಂ ನಾವೆದ್ದು
ಬಂದು ನಿಂತಿರುವೆವಾವ್ ಭೂತಗಳಂತೆ ! ೧

ತಂಪಾಗಲಿಲ್ಲಿನಿತು
ಸಿರಿಲತೆಯು ಒಡಿಸ್ಪಾತೆ !
ನಮ್ಮ ರಕ್ತವನೆಲ್ಲ ಸುರಿಯಬೇಕಾಯ್ತು !
ಎಲುವು ತೊಗಲಿರಡನ್ನು
ಬಿಟ್ಟು ಮಿಕ್ಕದುದನು
ಕಳೆಯಿತೀಲತೆ! ನಾವು ಸಾಯಬೇಕಾಯ್ತು ೨

ಮಾನಮರ್ಯಾದೆಯನು,
ಲಜ್ಜೆ ನಯ ಶೀಲವನು,
(ಲೋಕದಭಿಮತಕೆಲ್ಲ ಹುಟ್ಟುಕುರುಡಾಗಿ)
ಒಂದಿನಿತು ಲಕ್ಷಿಸದೆ,
ಧನಿಕರೆನ್ನುವ ಹದ್ದು
ಆಸುವುಳ್ಳೊಡಂ ಕೂಡ ಕೂಡುತಿದೆ ಮೇಲೆರಗಿ ! ೩

ಕಣ್ಣೀರು ಹರಿಹರಿದು
ಕಣ್ಣುಗಳು ಗುಳಿಬಿದ್ದು
ಮಾಂಸರಕ್ತವನೆಲ್ಲ ನಿಮಗೆ ಬಲಿಮಾಡಿ :
ಓಡಾಡಲಳವಿರದೆ
ಬಿದ್ದುಕೊಂಡಿರುವೊಡೆ,
ಕೊಲ್ಲಲೆಂದೆರಗುವುದೆ ನರಮಾಂಸಭಕ್ಷಕರೆ ? ೪

# ಓ ತಾಯೆ, ಭೂದೇವಿ!

ಓ ತಾಯೆ, ಭೂದೇವಿ, ಇದೂ ಈ ಕೃಷೀವಲರು
    ನೀಚ ಶ್ರೀಮಂತಸ್ವಾರ್ಥದ ಗಾಣದಲಿ ಸಿಕ್ಕಿ
ಕಣ್ಣೀರು, ಕೆನ್ನೀರು ಬಸಿಬಸಿದು, ನಿರ್ಬಲರು
    ತಾವಾಗಿ, ಗತಿಗೆಟ್ಟು, ಸಾವ ಬಾಯಲಿ ಬಿಕ್ಕಿ,
ನಿನ್ನ ನೋಡುತಲಿಹರು! ನೀನೋ ಸುಮೌನದಲಿ
    ನಿಂತಿರುವೆ! ಏಕಿಂತು? ತೆರೆಬಾಯ! ಏಳೇಳು!
ಯುಗಯುಗದಿ ಸುರಿಹರವ ಕೆನ್ನೀರ ಪಾನದಲಿ
    ತೃಪ್ತಿಪಡೆಯದಲಿವರನೂ ನುಂಗುವೆಯ? ಹೇಳು!

ಸುಖವರಕೆ ನೀನಗಲು ಬಲಿ ಬೇಕೆ? ಯಾವ ಬಲಿ?
ಯಾರ ಬಲಿ? ನಿನ್ನ ಪ್ರೇಮದ ಕೃಷೀವಲರ ಬಲಿ?
    ಇಲ್ಲ? ಮತ್ತಾರಿಲ್ಲ? ಇವರ ಹರಿಯುತ ತಿಂಬ
ಧನಿಕ ರಾಕ್ಷಸರಿಲ್ಲೆ? ಸ್ವಾರ್ಥಿಗಳು ವಂಚಕರು,
ಕುಹಕಿಗಳು, ಖಲರಿಲ್ಲೆ? ಇಲ್ಲೆ ಭೂಕಂಟಕರು?
    ನಿನಗಿವರು ಬಲಿಯಪ್ಪುದೆಸು ಎಂತು ನಾ ಕಾಣೆ?

—ಶಾಶ್ವತ [illegible]

# ಮೂಡಿ ಬಂದುದೆ ಸೊಗಸು

(ರವೀಂದ್ರರ ಕವನವೊಂದರ ಅನುವಾದ)

೧

ಈ ನಾಡಿನಲಿ ನಾನು ಮೂಡಿ ಬಂದುದೆ ಸೊಗಸು
ಭಾರತವ ಪ್ರೀತಿಸುವ ಭಾಗ್ಯವೆನಗಾಯ್ತು ;
ಅರಸಿಯೈಸಿರಿ ತಾಯಿಗಿಲ್ಲದಿರಲೇನು ?
ಅವಳ ಒಲುಮೆಯ ಸಿರಿಯು ನನ್ನದಾಯ್ತು

೨

ಎಲ್ಲಿಲ್ಲದಿಹ ಕಂಪು ಅವಳ ಅಲರುಗಳಿಂದೆ
ನನ್ನೆದೆಯ ಸಿರಿಯಾಗಿ ಸೂಸುತಿದುದು ;
ಅಮಲಸೌಂದರ್ಯದಿಂ ಹೃದಯಮಂ ತುಂಬುವೀ
ಬೆಳ್ದಿಂಗಳನ್ನೆಲ್ಲ ಬೇಗಲಹುದು ?

೩

ನನ್ನ ಕಣ್ಣಿಗೆ ಹೊಳೆದ ಮೊತ್ತಮೊದಲಿನ ಬೆಳಕು
ಭಾರತದ ಗರ್ಗದಿಂದಿಳಿದು ಬಂತು !
ತೆರೆದ ಕಣ್ಣುಗಳೊಮ್ಮೆ ಮುಚ್ಚಿಮುಗಿಯುವ ಚಣದಿ
ಅದೆ ಬೆಳಕು ಮುತ್ತಿಡಲು ಪುಣ್ಯವೆನಿತು ?

———:———

# (ಬರಲಿರುವ) ಯುಗಾದಿ

೧

ಬರಲಿದೆ ಬಾಳಿನ ಹೊಸತಿಲ ಬಳಿಯಲಿ
ಇದೊ ನವ ಸಂವತ್ಸರದಾಟ!
ಯಾವುದು ಛಲವನು ಯಾವುದು ಫಲವನು
ತಂದಿದೆ, ತರಲಿದೆ ನಮಗಾಗಿ

೨

ಬಾಳಿನ ಬೇವನು ಸಲೆ ಸಿಹಿಗೊಳಿಸಲು
ಯಾವ ಬೆಲ್ಲವನು ತರಲಿಹುದು ?
ಗೋಳಿನ ಕತೆಯನು ರಂಜನೆಗೊಳಿಸಲು
ಯಾವ ಬಣ್ಣವನು ತುಂಬುವುದು ?

೩

ಬೆಂದಿಹ ಒಡಲಿಗೆ, ನೊಂದಿಹ ಕರುಳಿಗೆ
ತಂಪನೆಂತು ತಾ ತರಲಿಹುದು ?
ಮಳಲುಗಾಡಿನಲಿ ಬತ್ತಿದ ಎದೆಯಲಿ
ರಸವನೆಂತು ಚಿಮ್ಮಿಸಲಿಹುದು ?

೪

ಬಗೆಗಣ್ಗಳ ಬೆಳಗುವ ಅಂಜನವಿರೆ
ಯುಗಾದಿ ಅದನೇಂ ತರಬಹುದೆ ?
ಎದೆಯ ಕಿವುಡನುರೆ ಪರಿಹರಿಸುವ ದಿ-
ವ್ಯಾಷಧಿಯೊಡನದು ಬರಬಹುದೆ ?

೫

ತರುಲತೆಗಳಿಗೆಳೆದಳಿರಿಡುವಂದದಿ
ಮನ-ಬನವನು ಚಿಗುರಿಸಲಿಹುವೆ ?
ಹಕ್ಕಿಯ ಕೊರಲಂ ಹಾಡ ಹರಿಸುವೊಲು
ಎದೆಯ ಹಾಡನುಕ್ಕಿಸಬಹುವೆ ?

೬

ಮಘುಮಂದಾನಿಲರಿಂದೊಡಗೂಡುತ
ಸಿಂಗರಿಸಲದೇಂ ಬರಿ ನೆಲವ ?
ಭಾರತ-ಜನ-ಜೀವನವನು ಅರಳಿಸಿ
ಸೂರೆಗೈವುದೇ ಸೌರಭವ ?

೭

ಮನೆಗೆ ಮನೆಗೆ ಮಾಂತಳಿರ ತೋರಣವ
ತೂಗಿಸಲದರಿಂದೇನಂತೆ ?
ಮನದಿ ಮನದಿ ಮಂಗಳದ ಭಾವನೆಯ
ಬೆಳಗಿಸಲದೆ ಸಾರ್ಥಕವಲ್ತೆ ?

# (ಬರಲಿರುವ) ಯುಗಾದಿ

೧

ಬರಲಿದೆ ಬಾಳಿನ ಹೊಸತಿಲ ಬಳಿಯಲಿ
ಇದೊ ನವ ಸಂವತ್ಸರದಾಟ !
ಯಾವುದು ಛಲವನು ಯಾವುದು ಫಲವನು
ತಂದಿದೆ, ತರಲಿದೆ ನಮಗಾಗಿ

೨

ಬಾಳಿನ ಬೇವನು ಸಲೆ ಸಿಹಿಗೊಳಿಸಲು
ಯಾವ ಬೆಲ್ಲವನು ತರಲಿಹುದು ?
ಗೋಳಿನ ಕತೆಯನು ರಂಜನೆಗೊಳಿಸಲು
ಯಾವ ಬಣ್ಣವನು ತುಂಬುವುದು ?

೩

ಬೆಂದಿಹ ಒಡಲಿಗೆ, ನೊಂದಿಹ ಕರುಳಿಗೆ
ತಂಪನೆಂತು ತಾ ತರಲಿಹುದು ?
ಮಳಲುಗಾಡಿನಲಿ ಬತ್ತಿದ ಎದೆಯಲಿ
ರಸವನೆಂತು ಚಿಮ್ಮಿಸಲಿಹುದು ?

೪

ಬಗೆಗಣ್‌ಗಳ ಬೆಳಗುವ ಅಂಜನವಿರೆ
ಯುಗಾದಿ ಅದನೇಂ ತರಬಹುದೆ ?
ಎದೆಯ ಕಿವುಡನುರೆ ಪರಿಹರಿಸುವ ದಿ-
ವ್ಯೌಷಧಿಯೊಡನದು ಬರಬಹುದೆ ?

೫

ತರುಲತೆಗಳಿಗೆಳೆದಳಿರಿಡುವಂದದಿ
ಮನ-ಬನವನು ಚಿಗುರಿಸಲಿಹುವೆ ?
ಪಕ್ಕಿಯು ಕೊರಲಂ ಹಾಡ ಹರಿಸುವ್ರೊಲು
ಎದೆಯ ಹಾಡನುಕ್ಕಿಸಬಹುವೆ ?

೬

ಮಧುಮಂದಾನಿಲರಿಂದೊಡಗೂಡುತ
ಸಿಂಗರಿಸಲದೇಂ ಬರಿ ನೆಲವ ?
ಭಾರತ-ಜನ-ಜೀವನವನು ಅರಳಿಸಿ
ಸೂರೆಗೈವುದೇ ಸೌರಭವ ?

೭

ಮನೆಗೆ ಮನೆಗೆ ಮಾಂದಳಿರ ತೋರಣವ
ತೂಗಿಸಲದರಿಂದೇನಂತೆ ?
ಮನದಿ ಮನದಿ ಮಂಗಳದ ಭಾವನೆಯ
ಬೆಳಗಿಸಲದೆ ಸಾರ್ಥಕವಾತ್ತೆ ?

---

# ದುರ್ಭಾಗ್ಯ ಬಂಗಾಲ!

ಎಂಥ ಭಾಗ್ಯವಂತ ನಾಡಿಗೆಂತು ವಿಧಿಯ ಶೂಲಾ!
ಯಾವ ಕೂಗು ಎನಿತು ಕೊರಗು ಎತ್ತಣಿಂದ ಜ್ವಾಲಾ!
ಜವನ ಕಾಟ, ರುದ್ರನೋಟ! ಕಣ್ಗೆ ಕ್ರೂರ ಜಾಲಾ ೧

ವಂಗದೇಶ ಭಂಗವಾದ ಭಗ್ನ ನಗ್ನ ನೋಟಾ
ಹಾದಿ ಹಾದಿ ಹೆಣದ ರಾಶಿ! ಅದುವೆ ಮಾರಿಗೂಟಾ
ದಾಹ, ದಾಹ, ಹಸಿವೆ ಹಸಿವೆ! ಅಕೋ ಕರ್ಪುದಾಟಾ! ೨

"ಅನ್ನ ಅನ್ನ"ವೆಂಬ ಆರ್ತನಾದ ಜಗವ ತುಂಬಿತೇ?
ಕುದಿತ! ಕುದಿತ! ಅಹಾ ಎದೆಯ ರಗುತವನ್ನೆ ಹೀರಿತೇ?
ಪ್ರಳಯ ಭದ್ರಕಾಳಿಯೆಂತೆ ಬರಿಯ ವಿಷವ ಕಾರಿತೆ! ೩

ಒಡಲು ಬೆನ್ನ ಸೇರಿ ಜೀವ ಕಣ್ಣಿನಲ್ಲಿ ನೆಲಸಿದೆ;
ಅಸ್ಥಿಯ ಸಂಕೋಲೆಗಳಲಿ ಶಿಲುಕಿ ನರಳುತಿರುತಿದೆ,
ಯಾವ ಆಶೆಗಿನಿತು ನಾಶ ದೇಶಕೊದಗಿತೆ! ೪

ಕರುಳು ಸುರುಳಿಗಟ್ಟಿ ರೊಪ್ಪವಾಗಿ ನೆಲವನಪ್ಪಿರೆ,
ಅರ್ಧ ಕರ್ಚಿದವಡು ಚಾಚಿದಂಥ ರಕ್ತನಾಲಗೆ,
ಕಲ್ಲು ಕರಗುವಂಥ ದೀನ ದೃಶ್ಯ ಎದೆಯನಿರಿಯದೆ? ೫

ನಲ್ಮೆಯಿಂದ ನಗುವ ನಾಡು ಮಸಣ ಬೀಡು ಆಯಿತೆ,
ಸ್ವರ್ಗ ಕಳಚಿ ಶೂನ್ಯಮಾಗಿ ಕೇಡು ಗುಡಿಯ ಕಟ್ಟಿತೆ,
ರಣವೆ ಎದ್ದು ಕಬಳಿಪಂತೆ ಕ್ರೌರ್ಯವಳತೆಗೆಟ್ಟಿತೆ! ೬

ಮಾತೆ ಮಗುವ ಹರಿದು ತಿಂದಳೆಂಬ ಕ್ರೂರವಾರ್ತೆಗೆ,
ಅಯ್ಯೋ! ಎದೆಗೆ ಸಿಡಿಲು ಬಿಡಿದು ಜಗವು ನಡುಗಲಾರದೆ?
ತಾಯಮೋಹಗಳನು ಹಸಿವೆ ತಿಂದು ತೇಗಿತೆ!

ಕನಕವನ್ನೆ ಬಿತ್ತಿ ಬೆಳೆದ ವಂಗನಾಡಿದಲ್ಲೇ ?
ಸಕಲ ಸೌಭಾಗ್ಯ ರವಿಯು ಇಲ್ಲಿ ಬೆಳೆಗಲಿಲ್ಲವೇ ?
ಅಮರ ಗಂಗೆ ಹರಿವ ವಿಪುಲ ಪುಣ್ಯ ಭೂಮಿಯಲ್ಲವೆ ! ೮

ಭಾರತಕ್ಕೆ ಭಾಗ್ಯದಾತರಾದ ಕ್ರಾಂತಿಕಾರರು,
ದಾಸ, ಘೋಷ, ಬೋಸರೆಲ್ಲ ನಿನ್ನ ಕೀರ್ತಿ-ನೇತ್ರರು,
ಆತ್ಮತ್ಯಾಗ ಸತ್ಯ ಸೇವೆಗೈದ ಅಮೃತಪುತ್ರರು ! ೯

ಜಗದನಂತ ಗಗನದಲ್ಲಿ ಮೆರೆದ ಕವಿ ರವೀಂದ್ರರು,
ಅಮರ ಜ್ಯೋತಿ ವಿಶ್ವಕೀರ್ತಿ ದ್ಯೋತಕರು ನರೇಂದ್ರರು,
ವಂಗಮಾತೆ, ನಿನ್ನ ಬನ್ನಕಾಗಿ ಅದೋ ಮೊರೆವರು ! ೧೦

ಮಾನ್ಯ ವೀರರೆಲ್ಲ ಏಳಿ, ನಿಮ್ಮ ತಾಯಸೇವೆಗೆ,
ಇಂಥ ಸಮಯದಲ್ಲಿ ನೀವು ಮುರಳಿ ಮೂಡಿ ಬರದಿರೆ,
ಮತವು, ತತ್ವ, ನನ್ನಿ, ನೀತಿ, – ಎಲ್ಲ ಮಿಥ್ಯವಲ್ಲವೇ ? ೧೧

---

# ಉಮರನ ರುಬಾಯಿ-ಯಾತ್ *

ಹನ್ನೊಂದನೆಯ ಶತಮಾನದ ಪರ್ಶಿಯಾದೇಶದ ಕಾವ್ಯಾಕಾಶದಲ್ಲಿ ಒಂದು ಧ್ರುವತಾರೆ ಮೂಡಿತು. ಫಿರ್ದೂಸಿಯ ಮಹಾಪುರಾಣಕಾಲ ಮುಗಿದಿತ್ತು. ಜನತೆಯಲ್ಲಿ ವೈಜ್ಞಾನಿಕ ಮನೋಭಾವ ಕ್ರಮಕ್ರಮೇಣ ಮನೆಮಾಡುತ್ತಿತ್ತು. ಜಾಮಿತಿ, ರೇಖಾಗಣಿತ, ಖಗೋಲ ಶಾಸ್ತ್ರಗಳಲ್ಲಿ ಸಂಶೋಧನೆಗಳಾಗುತ್ತಿದ್ದವು. ಪಂಚಾಂಗದ ನಿರ್ಮಾಣಕಾರ್ಯ ನಡೆದಿತ್ತು. ಕುರಾನ ಷರೀಫದ ಪರಿಷ್ಕೃತ ಆವೃತ್ತಿಯೂ ಸಿದ್ಧವಾಗುತ್ತಿತ್ತು. ವಿಚಾರಜಗತ್ತಿನಲ್ಲಿ ನವೋದಯ ತಲೆದೋರಿ ಅದ್ಭುತ ಕ್ರಾಂತಿಯನ್ನುಂಟುಮಾಡುತ್ತಿತ್ತು. ಇವೆಲ್ಲವುಗಳ ಪ್ರವರ್ತಕನೇ ರುಬಾಯಿಯಾತ್ ಬರೆದ ಉಮರ್ ಖಯ್ಯಾಂ. ನವೋದಯದ ನಾಯಕತ್ವ ಉಮರನ ಪಾಲಿಗೆ ಬಂದಿತ್ತು. ಆದರೆ ಅವನ ಕೂರಲಗಿನಂತಹ ವಿಚಾರದೃಷ್ಟಿ ಪಂಡಿತರಿಗೆ ತುಂಬ ಅಪ್ರಿಯವಾಯಿತು. ದೇಶಭ್ರಷ್ಟತೆ, ನಿಂದನೆಯ ಸುರಿಮಳೆ, ಕೊಲೆಗಾರರ ಭೀತಿಗಳೆಲ್ಲವನ್ನೂ ಉಮರ್ ಎದುರಿಸಬೇಕಾಯಿತು.

ಧರ್ಮವೆಂಬುದೆಲ್ಲಾ ಸುಳ್ಳು – ಮಾನವನ ಮೋಸದ ಮೂಟೆಯೇ ಧರ್ಮವೆಂದು ಮೆರೆಯುತ್ತದೆ. ಇಹ ಸತ್ಯ, ಪರ ಮಿಥ್ಯ – ಇಲ್ಲಿರುವತನಕ ಸುಖವಾಗಿ ಉಂಡುಟ್ಟು ಸಾಯೋಣ ಎನ್ನುವ ಚಾರ್ವಾಕ ಮತವಾದಿಗಳ ಗುಂಪಿಗೆ ಉಮರ್ ಸೇರಿರಲಿಲ್ಲ. ಧರ್ಮದ ಹೆಸರಿನಲ್ಲಿ ಬರುವುದೆಲ್ಲಾ ಸತ್ಯ. ಅದರ ಶುದ್ಧ ಸ್ವರೂಪವನ್ನಳಿಸಿ, ಕೂಡಿಕೊಂಡಿದ್ದ ಕೊಳಚೆಯನ್ನು ಅಷ್ಟೇ ಆಧ್ಯತೆಯಿಂದ ಭಕ್ತಿಯಿಂದ ಆರಾಧಿಸಬೇಕು ಎನ್ನುವ ಸಂಪ್ರದಾಯಪ್ರಿಯರಿಂದಲೂ ಉಮರ್ ದೂರವಾಗಿದ್ದ.

ಧರ್ಮ, ದೇವರು, ಮತ, ನೀತಿ ಎಲ್ಲಾ ಮಾನವನ ಆತ್ಮಸಾಕ್ಷಾತ್ಕಾರದ ಹೇತುಗಳು. ಈ ಸಾಧನೆಯಲ್ಲಿ ಮಾನವ ಮಾನವನೊಂದಿಗೂ ಸೆಣಸಬೇಕು. ದೇವರೊಂದಿಗೂ ಕಾದಾಡಬೇಕು. ಘರ್ಷಣೆಯಿಂದ ಹಾಲಾಹಲ ಹುಟ್ಟಬಹುದು, ಆದರೆ ಅಮೃತ ಹುಟ್ಟಲೇಬೇಕು. ಎಲ್ಲಕ್ಕೂ ಹೆಚ್ಚಾಗಿ ಮನುಷ್ಯ ಹಳೆಯದು – ಹೊಸದು ಎರಡನ್ನೂ ತನ್ನ ವಿಚಾರದ ಮಾನದಂಡದಿಂದ ಅಳೆದು ಸತ್ಯಸಿದ್ಧವಾದುದನ್ನು ಒಪ್ಪಿಕೊಳ್ಳಬೇಕು – ಆಚರಣೆಯಲ್ಲಿಟ್ಟುಕೊಳ್ಳಬೇಕೆಂಬುದೇ ಉಮರನ ಮತ. ಇವನ ವಿಚಾರವಾದವನ್ನು ಅಪಾರ್ಥಮಾಡಿಕೊಂಡು ಕಾರ್ಲೈಲ್, ಹೇಸ್ಟಿ, ಸ್ವಿನ್

* ಉಮರನ ಬಗ್ಗೆ ಹೆಚ್ಚು ಪರಿಚಯ ಬಯಸುವವರು ಶ್ರೀ ಡಿ. ವಿ. ಗುಂಡಪ್ಪನವರು ತಮ್ಮ 'ಉಮರನ ಒಸಗೆ' (ಎರಡನೆಯ ಆವೃತ್ತಿ) ಗ್ರಂಥಕ್ಕೆ ಬರೆದಿರುವ ಪಾಂಡಿತ್ಯಪೂರ್ಣ ಮುನ್ನುಡಿಯನ್ನೂ ಧಾರವಾಡದ "Literary Committee, L.E. Association" ಪತ್ರಿಕೆಯಲ್ಲಿ ಬಂದ ನನ್ನ 'Omar Khayyam' (Vol. III. No. 1–2) ಲೇಖನಗಳನ್ನು ನೋಡಬಹುದು.

ಬರ್ನ್ಸ್ ಮೊದಲಾದ ಆಂಗ್ಲ ವಿದ್ವಾಂಸರು ಕವಿಗಳು ಉಮರನನ್ನು ಭೌತಿಕ ಸುಖಲೋಲುಪನಾದ ಪಾಪಶಿಶುವೆಂದು ಕರೆದಿದ್ದಾರೆ. ಅಲ್ಲಿ ಸಲ್ಲಬೇಕಾದರೆ ಇಲ್ಲಿಯೂ ಸಲ್ಲಬೇಕು ಎಂದು ಬಸವಣ್ಣನವರಂತೆ ನಂಬಿದ್ದ ಉಮರನ ಇಹಲೋಕವನ್ನು ಮಿಥ್ಯೆಯೆಂದೂ, ಮಾಯೆಯೆಂದೂ ಪರಿಗಣಿಸಲಿಲ್ಲ. ಆದರೆ ಅದಕ್ಕೆ ನಿತ್ಯತೆಯ ಸ್ವರೂಪವನ್ನೂ ಕೊಡಲಿಲ್ಲ. ನಿತ್ಯಲೋಕಕ್ಕೆ ಇದೊಂದು ಮೆಟ್ಟಿಲು ಎಂಬುದೇ ಅವನ ಮನವರಿಕೆ.

ಉಮರನನ್ನು ಐರೋಪ್ಯ ಜಗತ್ತಿನಲ್ಲಿ ಬೆಳಗಿಸಿದವನು ಫಿಟ್ಜ್-ಜರಾಲ್ಡ್ ಎಂಬ ಇಂಗ್ಲಿಷ್ ಕವಿ. ಆದರೆ ಫಿಟ್ಜ್-ಜರಾಲ್ಡ್ ಉಮರನ ವಿಚಾರಗಳನ್ನು ತನ್ನ ಎರಕದಲ್ಲಿ ಹೊಯ್ದು ಆದರ ನಿಜಸ್ವರೂಪವನ್ನು ಮರೆಮಾಚಿದ. ಉಮರ ಸ್ವಿನ್‌ಬರ್ನ್, ಬೈರನ್ ಮೊದಲಾದ ಸುಖಲೋಲುಪ ಕವಿಗಳಂತೆ ಎಂಬ ತಪ್ಪುಭಾವನೆ ಮೂಡಲು ನೆರವಾದ.

ಉಮರನ ಕಾವ್ಯ ಅವನ ಜೀವನದಲ್ಲಿ ಆನುಷಂಗಿಕವಾಗಿ ಬಂದದ್ದು. ಸರ್ವಜ್ಞನಂತೆ ಅವನು ತನ್ನ ಭಾವನೆಗಳನ್ನು ಒಂದೊಂದು ಚೌಪದಿಯಲ್ಲಿ ಚಿಮುಕಿಸಿಬಿಟ್ಟಿದ್ದಾನೆ. ಹೊಸೆದು ಹೊಸೆದು 'ಸರಸ್ವತಿಯ ಗೋಣುಮುರಿದು' ಕಾವ್ಯ ಬರೆಯುವುದಕ್ಕೆ ಅವನು ಹೊರಡಲಿಲ್ಲ. ಸರ್ವಜ್ಞ, ವಚನಕಾರರು, ಹರಿದಾಸರು ಇವರ ವಿಚಾರವೈಖರಿಯನ್ನರಿಯಲು ಉಮರನ ರುಬಾಯಿಯಾತ್‌ಗಳು ತುಂಬ ಸಹಾಯವಾಗುತ್ತವೆ. ಉಮರನ ವಾಣಿಯಲ್ಲಿ ಜಗತ್ತಿನ ಹೈತುಕವಾದಿಗಳ ವಿಚಾರವೈಭವ ತುಂಬಿತುಳುಕುವುದನ್ನು ನಾವು ಕಾಣಬಹುದು.

ಉಮರನ ರುಬಾಯಿಯಾತ್‌ಗಳನ್ನು ಫಿಟ್ಜ್-ಜರಾಲ್ಡನನ್ನನುಸರಿಸಿ ಕನ್ನಡಕ್ಕೆ ತಂದವರು ಶ್ರೀ ಡಿ.ವಿ. ಗುಂಡಪ್ಪನವರು ಮತ್ತು ಶ್ರೀ ಮ. ಗೋವಿಂದ ಪೈಗಳವರು. ಶ್ರೀ ಡಿ. ವಿ. ಜಿ. ಯವರು ತಮ್ಮ ಗ್ರಂಥದ ಎರಡನೆಯ ಆವೃತ್ತಿಯಲ್ಲಿ ಉಮರನ ಮತ್ತೆ ಕೆಲವು ಪದ್ಯಗಳನ್ನು ಸೇರಿಸಿ ಮತ್ತಷ್ಟು ಉಪಕಾರಮಾಡಿದ್ದಾರೆ. ಇಲ್ಲಿ ಉಮರನ ಮೂಲ ರುಬಾಯಿಯಾತ್‌ಗಳ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಡಲಾಗಿದೆ. ಮೂಲವನ್ನು ನನಗೆ ಓದಿ ಅರ್ಥಹೇಳಿ ಉಪಕಾರಮಾಡಿದ ಮುಂಬಯಿಯ ಪ್ರಸಿದ್ಧ ಉಮರ್-ಸಂಶೋಧಕರಾದ ಶ್ರೀ. ಜೆ. ಇ. ಸಕ್ಲಾತ್‌ವಾಲಾ ಅವರಿಗೂ, ಹೈದರಾಬಾದಿನ ದಿವಂಗತ ಮೌಲ್ವಿ ನಯ್ಯಾರ್ ಅವರಿಗೂ ನಾನು ಋಣಿ. ಈ ಅನುವಾದಕ್ಕೆ ಒಂದು ಸ್ವರೂಪವನ್ನಿತ್ತು ಇಂತು ನಿಲ್ಲಲು ನೆರವಾದ ಗೆ॥ ಅರ್ಚಕ ವೆಂಕಟೇಶ ಮತ್ತು ಗೆ॥ ಕುಮಾರ ವೆಂಕಣ್ಣನವರಿಗೆ ನನ್ನ ಕೃತಜ್ಞತೆ ಸಲ್ಲಿಸುತ್ತೇನೆ.

ಅ. ನ. ಕೃ.

# ಉಮರನ ರುಬಾಯಿಯಾತ್

೧

ಗೆಲುವಾಗು! ಕ್ಷೀಣಶಶಿ ಮತ್ತೆ ಬೆಳೆಯುತ್ತಿಹನು
ಹೊರಡುತಿವೆ ಬಾಜಾಬಜಂತ್ರಿಗಳ ಸಾಲು;
ಹಳಧಿ ಚಂದಿರ ಮುಪ್ಪಿನಿಂ ಬಾಗಿ ಸೊರಗಿಹನು;
ಮತ್ತೆ ಚೇತನಗೊಂಡು ನೋವ ನೀಗುವನು

೨

ಗೆಲುವಿನಿಂ ತುಂಬಿಹುದು ನಿನ್ನ ಬೆಳಕದು ನನ್ನ
ಮಂಕು ಮನವಂ; ನೋಡೆ ಬೇರಾವ ಮೋರೆ
ನಿನ್ನ ನೋಡಿದಡಲ್ಲಿ ನನ್ನ ಮೊಗ ಕಾಣುವೆನು
ನನ್ನೊಳಗೆ ಕಂಡರೂ ಅದೆ; ಇಲ್ಲ ಬೇರೆ

೩

ಇನಿಯನಾ ಹೃದಯಸ್ಪಂದನವಾಂತು ಮರುನುಡಿದ
ಹೃದಯ; ಹೃದಯದ ಸತ್ಯ ಕೇಳ್ದ ಕಿವಿಯೆಲ್ಲಿ?
ತನ್ನ ದಿವ್ಯ ಪ್ರತಿಭೆಯಲ್ಲಿ ಕೃಪೆ ತೋರಿದಾ
ದೇವನಾ ಮೋಗನೋಳ್ಪ ಕಣ್ಣದೆಲ್ಲಿ?

೪

ನಿನ್ನ ವೇದಿಕೆಯೆಡೆಗೆ ಬಾರದಿದು ಹಾರ್ವಮನ
ನನ್ನ ಪಾಪದ ಫಲವಸುಂಬೆ ನೆಲಮುಟ್ಟೆ
ಓ, ಅಮಾನುಷ ಮಾಯೆಗಾರ ನಿನ್ನಿರವಾರು
ಬಲ್ಲವರು, ಇದ್ದರದು ಸೀನೆ ಇರಬಹುದು

೫

ಎನ್ನ ದೇಹ, ಪ್ರಾಣ, ಸರ್ವಬಲ, ಎನ್ನಿರವು,
ಎನ್ನ ಆತ್ಮವು, ಎನ್ನ ಹೃದಯ ನೀನೆ.
ನೀ ಎನಗೆ ಆಶ್ರಯನು, ಮಿಲಿತ ನಿನ್ನೊಳು ನಾನು
ನಿಜವೊಂದೆ—ನೀನೊಬ್ಬ ನಿತ್ಯಪೂರ್ಣ

೬

ನಿನ್ನನರಸುತೆ ಮನವ ನೀಗಿಹುದು ಜಗ, ನಿನಗೆ
ಭಾಗ್ಯವಂತರು ಬಡವರೆಲ್ಲ ಸಮ, ನೀನು
ಬೋಧಿಸುವೆ; ಬಳಿಯಿರ್ದರೂ ನಿನ್ನನರಸುತಲಿ
ನಿನ್ನನರಿಯದ ಅಂಧ ಜೀವಿಗಳು ನಾವು

೭

ನಿನ್ನಂಥ ಮೂರ್ತಿಯೊಂದೆಸಗಿ ಪೂಜಿಸಿ ನಲಿವೆ
ನಿನ್ನ ಬಟ್ಟಲಿನಿಂದ ಮಧುವೆತ್ತಿ ಕುಡಿದು;
ನೀಗಿಕೊಂಡಿಹೆ ಪ್ರೇಮದಲ್ಲಿ ನಾನೆಂಬುದನು
ಈ ತ್ಯಾಗ ಬಾಳಿಗೂ ಕೋಟಿಮಡಿ ಮಿಗಿಲು.

೮

ಎನ್ನ ಇನಿಯಳ ಚೆಲುವ ಮೊಗವ ಕಂಡವರಿಲ್ಲ
ಕಂಡುಕೇಳಿದ ಮಾತು ಕಟ್ಟುಕತೆಯೆಲ್ಲ;
ಕೇಳಿದವನಿಂ ಕೇಳಿದವನಿಂದ ಇದನೆಲ್ಲ
ಕೇಳ್ದನಿದ ಹೇಳ್ದವಗೆ ಅರಿವುಯಿಲ್ಲ

೯

ನಿರ್ಮಿಸಿದೆ ಜೀವನದ ಹಾಸುಹೊಕ್ಕನು ನೇದು
ಎನ್ನ, ನಾ ನಟ, ನೀನೆ ಸೂತ್ರಧಾರ;
ಪಾಪಪುಣ್ಯಗಳಿಲ್ಲ ನಾಗೈದರೇನು ಅದು
ನಿನ್ನ ಆಣತಿ! ನಾನು ಅಲ್ಲ ಹೊಣೆಗಾರ

೧೦

ಹುಟ್ಟಿಸಾಯುವ ಎಲ್ಲ ಜೀವಿಗಳ ಪ್ರಭು ನೀನು
ಉಗಿಸದ ವಿಪ್ಲವದ ಚಕ್ರವನ್ನಾಳ್ವೆ
ಪಾಪಿ ದಾಸರನೆಲ್ಲ ಸೃಜಿಸುವವನೂ ನೀನೆ
ಇಂತಿರಲು ದೋಷವೆಲ್ಲಿಹುದು ಜೀವರಲಿ !

೧೧

ಸುಂದರ ವಸಂತ ಮಾಸದಿ ನದಿಯ ತೀರದಲಿ
ಚೆಲುವೆಯೊಬ್ಬಳು ಪಾನ ಪಾತ್ರೆ ನೀಡೆ ;
ಅದೆ ಸಗ್ಗ ನನ್ನ ಸುಖ ; ಎಲ್ಲರೊಪ್ಪದೆ ಇರಲಿ
ನಾನಲ್ಲ ಕುನ್ನಿ ಮೊಗ ತಿರುಹಲಿಕೆ, ನೋಡೆ !

೧೨

ಮಧುವ ತುಂಬಿದ ಹೂಜಿ, ಸನಿಹದಲಿ ಮನದನ್ನೆ,
ಹಸಿರುಹಾಸಿರೆ, ಬೇಕು ಇದೆ - ಸಗ್ಗಕಿಂತ
ಆಡುವರು ನಾಕ - ನರಕಗಳೆಂಬ ನುಡಿಯನ್ನೆ
ನರಕಕ್ಕೈದವರು - ಸಗ್ಗದೆ ಬಂದರಾರು ?

೧೩

ಪಾಪಿ ಈ ದಾಸ, ನಿನ್ನ ಅನಂತ ಕೃಪೆಯಲ್ಲಿ ?
ನಿನ್ನ ತೇಜದಿ ಬೆಳಗು ಎನ್ನ ಹೃದಯವನು
ಎನ್ನ ಸದ್ಗುಣಕೆ ಸಗ್ಗವನಿತ್ತೆಯಾದೊಡೆ
ಅದುವೆ ವಿನಿಮಯ, ನಿನ್ನ ಕೃಪೆಯದೆಲ್ಲಿ ?

೧೪

ಹಿರಿದೊ ನಿನ ಕರುಣೆ, ನನ ಪಾಪ ಹಿರಿದೋ ಅರಿಯೆ
ನಾ ಪಾಪಕರ್ಮದಲಿ ಶತಮಾನ ಉಳಿದೆ
ಓ ದೇವ, ನೀ ಸೃಜಿಸಿದಂತೆ ಇಹೆ, ಬಾಳಿನ್ನ
ನಿನ್ನ ಕರುಣೆಯೆ ಕಾದುಕೊಂಡಿರುವುದು.

೧೫

ಎನ್ನ ಮಧುಪಾತ್ರೆಯೆನ್ನೊಡೆದು ಮಧುವನು ಸುರಿ
ಬಾಳುವೆಯ ಬಾಗಿಲನು ಮುಚ್ಚಿ, ದೇವ,
ಇದು ಸತ್ಯ ; ಓ, ಎನ್ನ ಬಾಯ್ಗೆ ಹುಡಿ ಎರಚಿರುವೆ
ಆಚಣದಿ ಬುದ್ಧಿ ಸ್ಥಿರವಿರಲಿಲ್ಲ ನಿನಗೆ

೧೬

ಅರ್ಹನಲ್ಲಂ ಉಗ್ರಶಾಸನಕೆ, ಬಿಡಿಸು ಸೆರೆ
ಆಗಸವೆ, ವರ್ತುಲದ ಚಲನ ಪ್ರಿಯಪಿಲ್ಲ
ನಿನ್ನ ದಯೆ ಅಸ್ಸೀಮ ಅವಿವೇಕಗಳದೆಲ್ಲ
ಎನೆ, ನಾನೆ ಪರಮ ಅವಿವೇಕಿ ಎಂದೆಣಿಸು

೧೭

ಒಣತು ಪಾಂಡಿತ್ಯದಿಂ ದೂರವಿರುವುದೆ ಲೇಸು
ಪ್ರಿಯೆಯ ಮುಂಗುರುಳಿನೊಡನಾಟ ಲೇಸು
ಕಾಲ ನಿನ್ನಯ ರಕ್ತ ಹರಿಪ ಮುನ್ನವೆ ಪಾನ
ಪಾತ್ರೆಯಾ ರಕ್ತರಿದು ನೆತ್ತರನು ಹರಿಸು

೧೮

ಅಧಿಕಾರ ಬಿರುದು ಘನ ಅಂತಸ್ತನಾಂತವರು
ಹೇಸುವರು ಬಾಳುವೆಗೆ ಕೆರಳಿ ಕನಲಿ ;
ಅದೊಡೇಂ ಮಾನವನು ಕ್ರೋಧದಾಳಾಗದಿರೆ
ಅವನನುಚ್ಚಾಗಿಸುವರಿರ್ದಿದು ಮೆಟ್ಟಿ

೧೯

ನಿನ್ನ ನಿತ್ಯದ ರೊಟ್ಟಿ ನಿನಗೆ ನಿರ್ಣೀತವಹುದು :
ಒಂದು ಕಣವೂ ಹೆಚ್ಚು ಕಡಮೆಯಾಗದದು
ದೇವನಾಣತಿಯದುವೆ ನಿನಗಿಲ್ಲವೆಂದೆಂದು
ಪರಿತಪಿಸದಿರು ಚಿಂತೆಯಿಂ ದೂರನಾಗು

೨೦

ದೈವೀ ರಹಸ್ಯವನ್ನರಿಯೆ ನೀನೆಳಸುವೊಡೆ
ಅವಜೀವಿಗು ಕೇಡನೆಣಿಸಬೇಡ
ಸಾವ ಭೀತಿಯ ಬಿಟ್ಟು, ರೊಟ್ಟಿ ಚಿಂತೆಯ ಬಿಸುಡೆ
ಕಾಲವರಿತೆರಡು ನಿನ್ನೆಡೆಬಹವು ನೋಡ

೨೧

ಪಾಪಗೈಯದ ಮನುಜನಾರು ಜಗದಲ್ಲಿಹನು
ಪಾಪಗೈಯ್ಯದೆ ನರನು ಬದುಕುವನು ಹೇಗೆ !
ನೀನೆನ್ನ ಪಾಪಕ್ಕೆ ಮುನಿದು ದಂಡಿಸಲಿನ್ನು
ನಿನಗೆಮಗೆ ಭೇದವೇನಿಹುದು ಹೇಳೆನಗೆ

೨೨

ಒಂದು ದಿನವೂ ಬದುಕೆ ಶುದ್ಧ ಮಧು ಕಾಣದಲೆ
ದೇಹಬಲ ಕುಂದುವುದು ಮಧುವನೀಂಟದಿರೆ,
ನಾ ದಾಸ ಬಟ್ಟಲಿನ್ನೊಂದ ಕುಡಿ ಎನೆ ಸಾಕಿ,
ಆದರೇಂ-ಆ ಮಾತು ಕೇಳಲಳವಲ್ಲ

೨೩

ಕುಡುಕನಿಗೆ ನರಕವೇ ಗತಿಯೆಂದು ಹೇಳುವರು
ನನಗೆ ಸಮ್ಮತವಿಲ್ಲ ಈ ತೆರನ ಮತವು
ಕುಡುಕ ಪ್ರೇಮಿಗಳಿಗೆಂದರೆ ನರಕ, ಸಗ್ಗವದು
ಎನ್ನ ಅಂಗೈಯಂತೆ ಬರಿದು ಅದು ನಿಜವು

೨೪

ಹಳತಿರಲಿ ಹೊಸತಿರಲಿ ಮಧುವಕೊಳ್ಳುವೆವಾವು
ಎಮ್ಮ ಐಸಿರಿಯನ್ನು ಇರ್ಪಣಕೆ ಮಾರಿ
ಸತ್ತಮೇಲೆಲ್ಲಿ ಹೋಗುವಿ ಎಂದು ಕೇಳುವಿರಿ –
ಮಧುವಿತ್ತು ಮನಬಂದ ಕಡೆ ನೀವು ಸಾರಿ

೨೫

ತಾರಿಲ್ಲಿ ಸಾಕಿ ನಿನ್ನಾ ಮಧುರ ಮಧುವನ್ನು
ನೀಡೆನಗೆ ಬಟ್ಟಲಂ, ಸರಪಳಿಯ ಎಳೆಯ
ಪ್ರೋಲ್ವಮಧುವೀಂಟುವೆಂ, ಉನ್ಮತ್ತ ನಾನೀಗ,
ಬಂಧಿಸಾ ಸಂಕಲೆಗಳಿಂ ಕೈಗಳನ್ನು

೨೬

ಹರಿವನಾರ್ ಪ್ರಾಚೀನ ಕರ್ಮದಾ ತೆರೆಯನ್ನು
ಅರಿವನಾರ್ ದೇವನಾ ಗುಪ್ತ ಗೂಢಗಳ
ಕೆಲರು ಚಿಂತಿಸಿ ಊಹಿಸಿವರಾದರೇನಿನ್ನು
ಪೂರ್ಣವಾಗದ ಕತೆಯದಾಗಿ ಉಳಿದಿಹುದು.

೨೭

ನಾಸ್ತಿಕತೆ, ಧರ್ಮ, ಸಂಪತ್ತು, ನಿತ್ಯತೆ, ಸತ್ಯ,
ಧಿಕ್ಕರಿಸಿ, ನ್ಯಾಯ, ಲಾವಣ್ಯ, ದೇವರನು,
ನಿಂದ ಕುಡುಕನ ಕಂಡೆ ನಿರ್ಜನ ಪ್ರದೇಶದಲಿ!
ಎಲ್ಲಿ ಸಿಗಬೇಕಂಥ ಗಂಡು ಮಾನವನು!

೨೮

ಕ್ರೋಧ ಲೋಭದ ಕಾಳ ಬಟ್ಟೆಯನ್ನರಸಿದರೆ
ನೀನಳಿವೆ ಮತಿಗೆಟ್ಟ ಭಿಕ್ಷುಕನ ತೆರದಿ
ಚಿಂತಿಸೈ ಎಲ್ಲಿದ್ದೆ, ಬಂದೆ ಎಲ್ಲಿಂ, ಏನ
ಗೆಯ್ಯುತಿಹೆ, ಎತ್ತ ನಡೆ, ಎಂಬುದಂ ಮನದಿ.

೨೯

ಒಬ್ಬ ನಾಸ್ತಿಕನೆಂದು ಇನ್ನೊಬ್ಬ ಕರೆಯುವನು
ತನ್ನ ಸಾಧನವಾಗಿ ಅವನ ದೂಡಲಿಕೆ,
ದೇವನಿಗೆ ಅವರ ಮಾಸಲು ಮಾಡಿ ನಾವಿನ್ನು
ಒರೆಗೆ ಹಚ್ಚುವ ಅವರ, ಮೇಲ್ಮೆ ನೋಡಲಿಕೆ

೩೦

ಯಾರ ಬಳಿ ತಿನಲಿನಿಸು ರೊಟ್ಟಿಯಿಹುದೋ, ಕಾಲ
ಚಾಚಲಿಕೆ ಪುಟ್ಟಹಾಸಿಗೆಯೊಂದು ಇಹುದೊ
ಆಳಲ್ಲ, ಅರಸಲ್ಲ, ನಿತ್ಯಸುಖಿ. ಜಗವೆಲ್ಲ
ಅವಗೆ ಚೆಲುವಿನ ಬೀಡು, ನಂದನವು, ಸಗ್ಗ!

೩೧

ಕೇಡ ಬಯಸುವರೆಲ್ಲ ಇಷ್ಟಾರ್ಥ ಸಾಧಿಸರು,
ಒಂದು ಕೇಡಿಗೆ ಹಿಂದೆ ನೂರ ಪಡೆಯುವರು ;
ಲೇಸ ಬಯಸುವೆ ನಿನಗೆ ನೀಕೇಡ ಬಯಸಿದರೆ
ಹಾನಿ ಇಲ್ಲವು ಎನಗೆ ನಿನಗಿಲ್ಲ ಲಾಭ.

೩೨

ಕಂಡವರು ಕೈಯ ಮುಗಿಯದ ಹಾದಿ ಹಿಡಿದು ನಡೆ
ಖ್ಯಾತಿ ತಪ್ಪಿಸಿ ಬಾಳ ನಡೆಸಲೆತ್ನಿಸುತೆ
ನೀ ಮಸೀದೆಗೆ ಪೋಪೆಯಾದೊಡಂ ಜನ ನಿನ್ನ
ಇಮಾಮನಾಗೆಂದು ಬಯಸದೊಲು ಪೋಗು.

೩೩

ಜಗದಲ್ಲಿ ತಾವೆ ಜ್ಞಾನಿಗಳರಸರಹುದೆಂದು
ಭಾವಿಸುವ ಮೂಢರಾ ಲೋಕದಲ್ಲಿ
ತಮ್ಮಂತೆ ಕತ್ತೆಯಲ್ಲದರಧರ್ಮಿಗಳೆಂದು
ತಿಳಿವರಿದನರಿತು ಸುಖಿಯಾಗಿ ಬಾಳಿಲ್ಲ.

೩೪

ಜನರು ತೆಗಳುವರೆಂದು ನನ್ನ ಜಗದನುಭವವ
ನಾನು ಬಿಚ್ಚೆನು, ಜ್ಞಾನಿ ಗುಣವಂತ ಜನರ
ಕೊರತೆಯಿರೆ ಅಧಿಕತಮ ಈ ಜಗದಿ ನಾ ಬಿಚ್ಚಿ
ಮನದಲಿರುವದನೆಲ್ಲ ನುಡಿಯಲಾರೆ !

೩೫

ನೆರೆಯವರ ಬಾಳಿಂಗೆ ಬೆಳಕಿತ್ತ ಪಂಡಿತರು
ಗುಣವಂತರಮಲಪ್ರತಿಭಾವಂತರೆಲ್ಲ
ಇರುಳ ಕಳ್ತಲೆಯಾಚೆ ಕಾಣದಾದರು ತಮ್ಮ
ಕತೆ ಹೇಳಿ ಸುಖನಿದ್ರೆ ಬಯಸಿ ಶರಣಾಗಿ

೩೬

ಕೆಲರು ಮತಧರ್ಮಗಳ ದಿಗ್ದರ್ಶನವ ಮಾಡಿ
ಕೆಲರು ನಿರ್ಧಾರ ಸಂದೇಹದಲೆ ತೂಗಿ
ಕೊನೆ ಮುಟ್ಟದಿರೆ ಕೇಳಿತೊಂದು ನುಡಿ "ಮೂಢರಿರ
ಇಲ್ಲಿಲ್ಲ - ಅಲ್ಲಿಲ್ಲ - ನಿಮ್ಮ ಹಾದಿ."

೩೭

ಅಯ್ಯೊ ! ಬಾಳಿನ ಸರಕು ಪಾರಿಪೋಪುದು ಬೇಗ
ದಿವ್ಯಹೃದಯನ ಘಾಸಿಗೊಳಿಸುವುದು ಸಾವು
ಆ ದೂರಲೋಕದಿಂ ತಿರುಗಿ ಬಂದವರಿಲ್ಲ
"ಹೇಳಲ್ಲಿ ಹೇಗಿಹುದು " ಎನೆ ಕೇಳೆ ನಾವು.

೩೮

ಶಿಲ್ಪಿ- ಈಯುವನೆನಗೆ ವರ್ಣ, ಆಕಾರವನು
ನಸುನೀಳದೇಹ ಕೆಂದಾವರೆಯ ವದನ
ಇಂತೀ ಅಯೋಗ್ಯ ಪಾರ್ಥಿವಸುಖದ ನಿಲಯಮಂ
ಅವನೇಕೆ ಸಿಂಗರಿಪನೋ ನಾನು ಅರಿಯೆ.

೩೯

ಸಾನನರ್ಹಂ ತಪದ ಭುವಿ, ದೇಗುಲಕೆ ನಡೆಯೆ
ಆವವಸ್ತುಂ ಎನ್ನ ಸೃಜನೆಗಾಯ್ತು
ದೇವ ಬಲ್ಲಂ, ವಿಟನು ದರಬೇಸಿಯಂತೆ ಇಡೆ
ನಾಕದಾಶೆಯು ನರಕ ಭೀತಿಯಿಲ್ಲ.

೪೦

ಧೂಳ ದೂಸರದಲ್ಲಿ ಮಾನವರ ತುಳಿತದಡಿ
ಕುರುಳುಗಲ್ಲಗಳಿಹವು ಅಳಿದ ಚೆಲುವೆಯರ
ಅರಮನೆಯ ಗೋಡೆಯಾ ಇಟ್ಟಿಂಗಿಯೆಡೆಯಿಹುದು
ಸುಲ್ತಾನನಾ ತಲೆ ವಜೀರನಾ ಬೆರಳು.

೪೧

ಟೈಗ್ರಿಸ್ ಮಹಾನದಿಯ ದಡದಲ್ಲಿ ಒಂದು ದಿನ
ಸನ್ಯಾಸಿಯೊಬ್ಬಗೆಂದಿತು ಅಸ್ತಿರುಂಡ:
"ರಾಜಮುಕುಟವದಿತ್ತು ಒಮ್ಮೆ ಈ ಶಿರದಲ್ಲಿ
ಇದ್ದುವರಸನ ಖ್ಯಾತಿಯಧಟುಗಳ ಇಲ್ಲಿ"

೪೨

ಕೊಡಲಿಯಿಂದೊಮ್ಮೆ ನಾ ಭುವಿಯ ತುಂಡನು ಹೊಡೆಯೆ
ದುಃಖಪೂರಿತ ಕೂಗು ಕೇಳಿಸಿತು ಕಿವಿಗೆ
"ಎಚ್ಚರಿಕೆ! ಮಾನವನು ನೀನಾಗೆ ದಯೆದೋರು
ನರನ ಕಣ್ ಕಿವಿ ತಲೆಗಳೆಲ್ಲ ಇಹವಿಲ್ಲಿ"

೪೩

ನಾವು ಬಾರದ ಮುನ್ನ ಸಾಗಿದುವು ಹಗಲಿರುಳು
ಆಕಾಶಗಳು ಸುತ್ತಿ ಉರುಳಿದುವು ಮತ್ತೆ
ಎಚ್ಚರದಿ, ಮೃದುವಾಗಿ ನಡೆ ಧೂಳಿ ನೆಲದಲ್ಲಿ
ಅದು ಒಮ್ಮೆ ಸುಂದರಿಯ ಕಣ್ಣು ಚೆಂಡು.

೪೪

ಜಗವೊಂದು ಹಳೆಸತ್ರ, ಹಗಲೊಮ್ಮೆ ಇರುಳೊಮ್ಮೆ
ಆಳಿದವು; ನೂರು ಜನ ಜಮುಷೀದರಿಲ್ಲಿ
ನೆಲಸಿದ್ದರದರೆದೆಯ ಮಡಿಲಲ್ಲಿ ಅಂತೆಯೇ
ಮಲಗಿದರು ನೂರು ಜನ ಬೆಹರಾಮರಿಲ್ಲಿ

೪೫

ಬಹಳ ಸೊಬಗಿನ ಬಟ್ಟಲದು ನರನ ತಲೆಬುರುಡೆ
ಮುದ್ದಿಕ್ಕಬೇಕೆಂಬ ಬಯಕೆ ಬಳಸುವುದು
ಆದರೇಂ ಜಗದ ಕುಂಬಾರನದ ಕೆಡಿಸುವನು
ತನ್ನ ಶಿಲ್ಪವ ತಾನೆ ಹೆಸರಳಿಸಿ ಮುರಿದು !

೪೬

ಕಳೆದ ಇರುಳಿನಲೊಮ್ಮೆ ಶಿಲೆಗೆ ಬೋಗುಣಿಯನ್ನ
ಅಪ್ಪಳಿಸಿದೆನು. ಕ್ರೂರ ಕಾರ್ಯವದು ದಿಟವು
ಆವರೂ ಹಿಗ್ಗಿದೆನು, ನುಡಿಯಿತದು ಇಂತು "ನೀ
ಅಪ್ಪೆ ಎನ್ನಂತೆ ; ನಾನಿದ್ದೆ ನಿನ್ನಂತೆ"

೪೭

ನನ್ನಂತೆ ಆ ಹೂಜಿ ನಲ್ಲನಾಗಿತ್ತೊಮ್ಮೆ
ನಲ್ಲೆಯಾ ಮೊಗ ನೋಡೆ ತೊಳಲುತಿತ್ತು
ಸುಂದರಿಯ ನಸುನೀಳ ದೇಹವನು ಬಳಸಿತ್ತು
ನೀಕಾಂಬ ಹೂಜಿಯಾ ಬಾಗಿರುವ ಹಿಡಿಯು

೪೮

ಮಿತವಾದ ಪಾನದಲಿ ಎಳ್ಳನಿತು ಸುಖವಿಲ್ಲ,
ಅಮಲೇರುವುದರಿಂದ ಭಾವಗಳು ನಿಂತು
ಮತಿಹೀನನಪ್ಪೆ, ಮಿತ ಅಮಿತಗಳ ಮಧ್ಯದೆಸೆ
ಯುಂಟದರೆ ದಾಸನಾ, ಅದೆ ಬಾಳು—ಕರ್ಮ.

೪೯

ಮಧುವ ಕುಡಿದೊಡೆ ನೀನು ಮತಿವಂತನಂತೆ—ಕುಡಿ
ಮಿತವಾಂತು, ಅಜ್ಞಾನದಲಿ ಮುಳುಗಬೇಡ
ರುದ್ರಮಧುವನ್ನೀಂಟಲವಕಾಶ ಸಿಕ್ಕಿದೊಡೆ
ಜನ ವಿರೋಧವ ಮಾತ್ರ ಗಳಿಸಬೇಡ.

೪೦

ನೀಳ ದೂಸರದಲ್ಲಿ ಮಾನವರ ತುಳಿತದಡಿ
ಕುರುಳುಗಲ್ಲಗಳಿಹವು ಅಳಿದ ಚೆಲುವೆಯರ
ಅರಮನೆಯ ಗೋಡೆಯಾ ಇಟ್ಟಂಗಿಯೆಡೆಯಿಹುದು
ಸುಲ್ತಾನನಾ ತಲೆ ವಜೀರನಾ ಬೆರಳು.

೪೧

ಟೈಗ್ರಿಸ್ ಮಹಾನದಿಯ ದಡದಲ್ಲಿ ಒಂದು ದಿನ
ಸನ್ಯಾಸಿಯೊಬ್ಬಗೆಂದಿತು ಅಸ್ಥಿರುಂಡ:
"ರಾಜಮುಕುಟವದಿತ್ತು ಒಮ್ಮೆ ಈ ಶಿರದಲ್ಲಿ
ಇದ್ದುವರಸನ ಖ್ಯಾತಿಯಧಟುಗಳೆ ಇಲ್ಲಿ"

೪೨

ಕೊಡಲಿಯಿಂದೊಮ್ಮೆ ನಾ ಭುವಿಯ ತುಂಡನು ಹೊಡೆಯೆ
ದುಃಖಪೂರಿತ ಕೂಗು ಕೇಳಿಸಿತು ಕಿವಿಗೆ
"ಎಚ್ಚರಿಕೆ! ಮಾನವನು ನೀನಾಗೆ ದಯೆದೋರು
ನರನ ಕಣ್ ಕಿವಿ ತಲೆಗಳೆಲ್ಲ ಇಹವಿಲ್ಲಿ"

೪೩

ನಾವು ಬಾರದ ಮುನ್ನ ಸಾಗಿದುವು ಹಗಲಿರುಳು
ಆಕಾಶಗಳು ಸುತ್ತಿ ಉರುಳಿದುವು ಮತ್ತೆ
ಎಚ್ಚರದಿ, ಮೃದುವಾಗಿ ನಡೆ ಧೂಳಿ ನೆಲದಲ್ಲಿ
ಅದು ಒಮ್ಮೆ ಸುಂದರಿಯ ಕಣ್ಣು ಚೆಂಡು.

೪೪

ಜಗವೊಂದು ಹಳೆಸತ್ರ, ಹಗಲೊಮ್ಮೆ ಇರುಳೊಮ್ಮೆ
ಆಳಿದವು; ನೂರು ಜನ ಜಮುಷೀದರಿಲ್ಲಿ
ನೆಲಸಿದ್ದರದರೆದೆಯ ಮಡಿಲಲ್ಲಿ ಅಂತೆಯೇ
ಮಲಗಿದರು ನೂರು ಜನ ಬೆಹರಾಮರಿಲ್ಲಿ

೪೫

ಬಹಳ ಸೊಬಗಿನ ಬಟ್ಟಲದು ನರನ ತಲೆಬುರುಡೆ
ಮುದ್ದಿಕ್ಕಬೇಕೆಂಬ ಬಯಕೆ ಬಳಸುವುದು
ಆದರೇಂ ಜಗದ ಕುಂಬಾರನದ ಕೆಡಿಸುವನು
ತನ್ನ ಶಿಲ್ಪವ ತಾನೆ ಹೆಸರಳಿಸಿ ಮುರಿದು !

೪೬

ಕಳೆದ ಇರುಳಿನಲೊಮ್ಮೆ ಶಿಲೆಗೆ ಬೋಗುಣಿಯನ್ನ
ಅಪ್ಪಳಿಸಿದೆನು. ಕ್ರೂರ ಕಾರ್ಯವದು ದಿಟವು
ಆದರೂ ಹಿಗ್ಗಿದೆನು, ನುಡಿಯಿತದು ಇಂತು "ನೀ
ಅಪ್ಪೆ ಎನ್ನಂತೆ ; ನಾನಿದ್ದೆ ನಿನ್ನಂತೆ"

೪೭

ನನ್ನಂತೆ ಆ ಹೂಜಿ ನಲ್ಲನಾಗಿತ್ತೊಮ್ಮೆ
ನಲ್ಲೆಯಾ ಮೊಗ ನೋಡೆ ತೊಳಲುತಿತ್ತು
ಸುಂದರಿಯ ನಸುನೀಳ ದೇಹವನು ಬಳಸಿತ್ತು
ನೀಕಾಂಬ ಹೂಜಿಯಾ ಬಾಗಿರುವ ಹಿಡಿಯು

೪೮

ಮಿತವಾದ ಪಾನದಲಿ ಎಳ್ಳನಿತು ಸುಖವಿಲ್ಲ,
ಅಮಲೇರುವುದರಿಂದ ಭಾವಗಳು ನಿಂತು
ಮತಿಹೀನನಪ್ಪೆ, ಮಿತ ಅಮಿತಗಳ ಮಧ್ಯದೆಸೆ
ಯುಂಟದರೆ ದಾಸನಾ, ಅದೆ ಬಾಳು—ಕರ್ಮ.

೪೯

ಮಧುವ ಕುಡಿದೊಡೆ ನೀನು ಮತಿವಂತನಂತೆ—ಕುಡಿ
ಮಿತವಾಂತು, ಅಜ್ಞಾನದಲಿ ಮುಳುಗಬೇಡ
ರುದ್ರಮಧುವನ್ನೀಂಟಲವಕಾಶ ಸಿಕ್ಕಿದೊಡೆ
ಜನ ವಿರೋಧವ ಮಾತ್ರ ಗಳಿಸಬೇಡ.

೫೦

ಮಧುವನ್ನು ಕುಡಿಯದೊಡೆ ಅದುವೊಂದು ಆಕ್ಷೇಪ
ಕುಡಿದಡೊಳ್ಳೆಯ ಹೆಸರು ಅಳಿಸಿಹೋಗುವುದು
ಸ್ವೇಚ್ಛಾವಿಹಾರಿ ದೊರೆ, ಯತಿಯು, ಕುಡಿಯಲುಬಹುದು ;
ಇವರ ಬಳಗಕೆ ಸೇರದಿರೆ—ಕುಡಿಯಬೇಡ.

೫೧

ಸೂಳೆಗೆಂದನು ಯತಿಯು "ಕುಡಿದು ಕೆಟ್ಟಿಹೆ. ಕಳೆದೆ
ನೀಚಪಾತ್ರವ ನಟಿಸೆ ನಿನ್ನದೆಲ್ಲ."
ಕೇಳಿದಳು "ಕಾಂಬಂತೆ ನಾನಿಹೆನು ನೀನಿಹೆಯ
ಯತಿರಾಜ ಮೂಡಿಹುದೆ ಶುಚಿಯು ಒಳಗೆ"

*

# ಕಾಲನಿಗೆ ಕವಿಮಾತು

ಓ, ಪ್ರಳಯರೌದ್ರ ಭಯಾನಕ ವಿಕೃತಮೂರ್ತಿ,
ಕೋಟಿ ಶತಸಹಸ್ರ ಶತಮಾನಗಳೆದೆಯ ಬಗಿದು
ರಕ್ತಖಂಡ ಮಾಂಸವನಗಿದಗಿದು ಮೊಗೆಮೊಗೆದು
ವಿಕ್ಕಟಕೆ ಧೀಂಕಿಡುವ ನಿನ್ನಾಸೆಯದು ಹುಸಿಕೀರ್ತಿ !
ಮನೊ ದಿಗ್ದಿಗಂತದೊಳು ಬುದ್ಬುದಿಸುವಾ ನಿನ್ನ
ತುಂಗೋತ್ತುಂಗ ಚಂಡಪ್ರಚಂಡ ರಕ್ತಮಾರ್ತಾಂಡ
ನಾಲಗೆಯೊಳು ತಿಮಿರಲಯವಾಯ್ತೆನ್ನ ಬಾಳ್ ! ಇತ್ತಂಡ–
ವಿರುಬಿನೊಳು ಜೀರ್ಣ ಜೀರ್ಣವೀ ವಿಶ್ವ, ಓ ಜನ್ನ !

ತ್ವರೆಯೊಳು ತೀರ್ಚು ತೀರ್ಚು ನಿನ್ನೀ ಕ್ಷುತ್ಪಿಪಾಸೆಯ
ಸಮಯವಿಲ್ಲ - ಓಡು, ಬರುತಿಹನದೊ ವಿಶ್ವಕರ್ಮ!
ಕೃತ್ಯಮಲ ರಂಗದೊಳು ನವಸೃಷ್ಟಿ ಅವನಾಶಯ ..
ಇದನರಿದು ಮುಂದಾಗು, ಮರ್ಯಾದೆಯದು ಲೋಕಧರ್ಮ !
ಇಲ್ಲದೊಡಾ ಜಗಚ್ಚರಿತ ಲೋಕಮಿತ್ರನ ನೇತ್ರ
ದಿಟ್ಟಿಯೊಳ್ ಸುಟ್ಟು ಭಸ್ಮವಾಗುವುದು ನಿನ್ನ ಗಾತ್ರ !

———:———

# ಸಮರ್ಪಣ

ನಮ್ಮಮ್ಮ ಶಾರದೆಯೆ
ವಾಣಿ ಜಗನ್ಮೋಹಿನಿಯೆ

೧

ಎದೆಯೆದೆಯ ನಂದನದಿ
ವಿಧವಿಧದ ಸೌರಭದಿ
ತುಂಬಿರುವ ಕಂಪುಡಿಗೆ
ತಂದಿಹೆವು ನಿನ್ನೆಡೆಗೆ

೨

ನೀನೊರೆದ ರಾಗಗಳ
ನೀನುಡಿದ ಭಾವಗಳ
ನೆಯ್ದಿಹೆವು ನೂತನದಿ
ನೆಯ್ಗೆಯ ನವಶಿಲ್ಪದಿ

೩

ಸುಖದುಃಖವನೆ ಕುಡಿದು
ಬೆಳಗು ಸಂಜೆಯ ಕಡೆದು
ಕೊಳಲಮಾಡಿ ತಂದೆವು
ನುಡಿಸಿ ಹೇಳು, ಚೆಂದವೆ ?

೪

ಬುವಿಯೆಲ್ಲ ಮಧುವಾಗಿ
ಸುಮದಂತೆ ನಯವಾಗಿ
ಹೊಸಹುಟ್ಟು ಬರಲೆಂದು
ಜೇನು ಕಟ್ಟಹೆವಿಂದು

——:——

# ಕವಿಗಳ ಪರಿಚಯ

## ೧. ಪಾಟೀಲ ಪುಟ್ಟಪ್ಪ

ಬೆಳಗಾವಿಯ ಲಾ ಕಾಲೇಜಿನಲ್ಲಿ ನ್ಯಾಯಶಾಸ್ತ್ರ ಕಲಿಯುತ್ತಿದ್ದಾರೆ. ವಿಜಾಪುರ ಜಿಲ್ಲೆಯವರು. ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಬರುವ ಇವರ ಲೇಖನಗಳು ಇವರ ಸುಪ್ತಚೇತನದ ಪ್ರತೀಕಗಳಾಗಿವೆ. ಗಂಡು ಗದ್ಯಶೈಲಿಯನ್ನು ಪುಟ್ಟಪ್ಪನವರು ಸಾಧಿಸಿಕೊಂಡಿದ್ದಾರೆ. ಕವಿ ರವೀಂದ್ರರ ಹಲವು ಗೀತೆಗಳನ್ನು ಮಾರ್ಮಿಕವಾಗಿ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಪ್ರಗತಿಶೀಲ ಲೇಖಕರ ಪರವಾಗಿ ಸತ್ಯ ಪ್ರಸಾರ ಮಾಡಿದ್ದಾರೆ. ತಮ್ಮ ಕವಿತೆಗಳ ಬಗ್ಗೆ ಬರೆಯುತ್ತಾ "ನನ್ನಲ್ಲಿ ಕವಿಯ ಭಾವವಿದೆ. ಊಹನೆ ಇದೆ. ಕವಿ ಅನುಭವಿಸುವ ಸುಖದುಃಖದ ಎಲ್ಲ ನಲಿವು, ನೋವನ್ನು ನಾನು ಅನುಭವಿಸುತ್ತೇನೆ. ಆ ಸ್ಥಿತಿ ಸುಮಾರಾಗಿ ಎಲ್ಲರಲ್ಲಿಯೂ ಇದ್ದೇ ಇದೆ. ಅವರೆಲ್ಲರೂ ಕವಿಗಳಲ್ಲ—ಆಗಲಾರರು. ಅವರಂತೆಯೇ ನಾನೂ! Where there is a heaven above and an earth below, there is the poet in his place. But what is wanted is a 'SEEING EYE and a SPEAKING TONGUE' ನನ್ನಲ್ಲಿ ಆ ನೋಡುವ ಕಣ್ಣೇನೋ ಇದೆ—ಆದರೆ ಆಡುವ ನಾಲಗೆ ಮಾತ್ರ ಇಲ್ಲ." ಇಲ್ಲವೆಂದು ಹೇಳುವ ಪುಟ್ಟಪ್ಪನವರ ಮಾತುಗಳಿಗೆ 'ಇದೆ' ಯೆಂದು ಹೇಳುವುದಕ್ಕೆ ಈ ಸಂಕಲನದಲ್ಲಿ ಬಂದಿರುವ ಮೂರು ಕವಿತೆಗಳೇ ಸಾಕ್ಷಿಗಳಾಗಿವೆ.

## ೨. ಕುಮಾರ ವೆಂಕಣ್ಣ

'ಕಾಯಕವೇ ಕೈಲಾಸ' ತತ್ತ್ವದ ದೃಷ್ಟಾಂತ ಬೇಕಾದರೆ ವೆಂಕಣ್ಣನವರನ್ನು ನೋಡಬೇಕು. ಇವರ ದುಡಿಮೆಗೆ ದಿನದ ಇಪ್ಪತ್ತುನಾಲ್ಕು ಗಂಟೆ ಸಾಲದು. 'ಭಾರತ ಶಕ್ತಿ' ಯೆಂಬ ಉಜ್ವಲ ಗೀತಾನಾಟಕವನ್ನು ಬರೆದಿದ್ದಾರೆ. ಪತ್ರಿಕಾ ಪ್ರಪಂಚದಲ್ಲಿ ೧೫-೧೬ ವರ್ಷಗಳ ಅನುಭವ. ಮಂಗಳೂರಿನಲ್ಲಿ 'ಚಿತ್ರಾ' ಎನ್ನುವ ಕಲಾ ಪತ್ರಿಕೆ

ಯನ್ನು ಸ್ಥಾಪಿಸಿ ನಡೆಸಿದರು. ೧೯೩೭ರ ಜನವರಿಯಲ್ಲಿ ಅಖಿಲ ಕರ್ನಾಟಕ ಮಕ್ಕಳ ಕೂಟವನ್ನು ಸ್ಥಾಪಿಸಿ ನಾಲ್ಕು ವರ್ಷ ನಡೆಸಿಕೊಂಡು ಬಂದರು. ನೂರಾರು ಕತೆ - ಕವನಗಳನ್ನು ಮಕ್ಕಳಿಗಾಗಿ ಬರೆದಿದ್ದಾರೆ. 'ಕಂಠೀರವ' ಪತ್ರಿಕೆಯ ಸಂಪಾದಕ ಮಂಡಳಿಯಲ್ಲಿ ಕೆಲಸಮಾಡಿದ್ದಾರೆ. 'ವಿಶ್ವಕರ್ನಾಟಕ'ದ ಉಪ ಸಂಪಾದಕರಾಗಿದ್ದರು. ಬೆಂಗಳೂರಿನ ಪ್ರಗತಿಶೀಲ ಲೇಖಕರ ಸಂಘದ ಕಾರ್ಯದರ್ಶಿಗಳಾಗಿದ್ದಾರೆ. ಕೇರಳದ ಕಲಾಮಂಡಲದಲ್ಲಿ ಶ್ರೀ ಗೋಪೀನಾಥರ ನೇತೃತ್ವದಲ್ಲಿ ಭಾರತೀಯ ನೃತ್ಯಗಳನ್ನಭ್ಯಸಿಸಿ 'ನಾಟ್ಯಾಚಾರ್ಯ' ಪ್ರಶಸ್ತಿಯನ್ನು ದೊರಕಿಸಿಕೊಂಡಿದ್ದಾರೆ. 'ಜನತಾ ಸಾಹಿತ್ಯ'ದ ಸಂಪಾದಕರಾಗಿ ಕನ್ನಡದಲ್ಲಿ ಉತ್ತಮ ರಾಜಕೀಯ ಗ್ರಂಥಗಳನ್ನು ಪ್ರಕಟಿಸುತ್ತಿದ್ದಾರೆ. ಇವರ 'ಶೀನಪ್ಪನ ಕೂಲಿ' ಕಾದಂಬರಿ ಪ್ರಗತಿಶೀಲ ಲೇಖಕರ ಸಂಘದಿಂದ ಪ್ರಕಟಿಸಲ್ಪಡುತ್ತದೆ. ಈ ಸಂಗ್ರಹದಲ್ಲಿ ಇವರು ಮಂಗಳೂರಿನ ನಿತ್ಯ ಜೀವನದಲ್ಲಿ ಕಂಡುಬರುವ ಕೆಲವು ಶ್ರಮಜೀವಿಗಳ ಚಿತ್ರಗಳನ್ನು ಸೊಗಸಾಗಿ ನಿರೂಪಿಸಿದ್ದಾರೆ. ಪ್ರತಿಯೊಂದು ವೃತ್ತಿಯೂ, ಅದು ಪರ ರಕ್ತೋಪಜೀವಿಯಾಗದಿದ್ದರೆ ಸಮಾನ ಗೌರವಾರ್ಹವಾದುದು ಎಂಬುದೇ ಕವಿತೆಗಳ ಮುಖ್ಯ ತತ್ತ್ವ.

೩. ಎಸ್. ಅನಂತನಾರಾಯಣ

ಮೈಸೂರಿನ ಪ್ರಗತಿಶೀಲ ಲೇಖಕರು. ಗದ್ಯಪದ್ಯಗಳೆರಡರಲ್ಲಿಯೂ ನುರಿತ ಕೈ. ಕಳೆದ ವರ್ಷದ ರಜತೋತ್ಸವ ಪದಕ ಇವರ 'ಬಾಡದ ಹೂ' ಕವಿತೆಗೆ ಮೈಸೂರು ವಿಶ್ವವಿದ್ಯಾಲಯದಿಂದ ದೊರೆಯಿತು. ಚೀನಾದ ಮೇಲೆ 'ಅಜೇಯ ಚೀನಾ' ಎಂಬ ಗ್ರಂಥ ಬರೆದಿದ್ದಾರೆ. ಕಾರ್ಲ್ ಮಾರ್ಕ್ಸ್ ಮಹಾಪುರುಷನ ಜೀವನ ಚರಿತ್ರೆ ಬರೆದಿದ್ದಾರೆ. ಕತೆ, ಕಾದಂಬರಿಗಳನ್ನೂ ಬರೆದಿದ್ದಾರೆ. ಪ್ರಗತಿಶೀಲ ಲೇಖಕರ ಮೇಲೆ ತಪ್ಪು 'ಆಕ್ಷೇಪಗಳನ್ನು ಹೊರಿಸಿ' 'ಕವಿ ಮಿತ್ರ'ರು ಬರೆದಿರುವ 'ಕಾವ್ಯಾಲಾಪ'ಕ್ಕೆ ಉತ್ತರರೂಪವಾಗಿ 'ವ್ಯರ್ಥಾಲಾಪ'ವನ್ನು ಬರೆದಿದ್ದಾರೆ.

**೪. ಕಾವ್ಯಾನಂದ**

ಹೈದರಾಬಾದಿನ ಪ್ರಗತಿಶೀಲ ಲೇಖಕರು. ಅಲ್ಲಿ ಸರ್ಕಾರಿ ಅಧಿಕಾರದಲ್ಲಿದ್ದಾರೆ. ಆದರೂ ಸ್ವಾತಂತ್ರ್ಯವನ್ನೂ ಸಾಹಿತ್ಯಸೇವಾಕಾಂಕ್ಷೆಯನ್ನೂ ಉಳಿಸಿಕೊಂಡಿದ್ದಾರೆ. ಇವರ ಕವಿತೆಗಳು 'ಜಯ ಕರ್ನಾಟಕ'ದಲ್ಲಿ ಕೆಲವು ಅಚ್ಚಾಗಿವೆ. ಉರ್ದು, ಫಾರಸಿ ಭಾಷೆಗಳಲ್ಲಿ ಕಾವ್ಯಾನಂದರಿಗೆ ಪರಿಶ್ರಮವಿದೆ. ಸತ್ಯ - ಆಗ್ರಹದಿಂದ ತುಂಬಿ ತುಳುಕುತ್ತಿರುವ ಇವರ ಕವಿತೆಗಳಲ್ಲಿ ಉಜ್ವಲ ದೇಶಾಭಿಮಾನ ವ್ಯಕ್ತವಾಗುತ್ತದೆ.

**೫. ಅರ್ಚಕ ವೆಂಕಟೇಶ**

ಕತೆ, ಕವಿತೆ, ಲೇಖನಗಳಲ್ಲಿ ಅರ್ಚಕರದು ನುರಿತ ಕೈ. ಹಳೆಯ ಛಂದಸ್ಸು, ಹೊಸ ಛಂದಸ್ಸು ಇವೆರಡರಲ್ಲಿಯೂ ಲಲಿತವಾಗಿ ಕವನ ಬರೆಯುವ ಶಕ್ತಿ ಅರ್ಚಕರಿಗೆ ಸಾಧಿಸಿದೆ. ಸೊಗಸಾಗಿ ಮಾತನಾಡುವುದನ್ನೂ ಇವರು ಬಲ್ಲವರಾಗಿದ್ದಾರೆ. ಮಕ್ಕಳ ಸಾಹಿತ್ಯದಲ್ಲೂ ನುರಿತ ಕೈ. ಕೆಲವು ಪುಟ್ಟಮಕ್ಕಳ ನಾಟಕಗಳನ್ನು ಬರೆದಿರುತ್ತಾರೆ. ರಸಋಷಿಯಲ್ಲಿ ಪ್ರಕಟವಾಗಿರುವ ಇವರ 'ಅದಕಂತಃ ತನನನ್ತ ಹಾಡೋಣ' ಕವಿತೆ ಕನ್ನಡ ಕಾವ್ಯಸಾಗರದ ಒಂದು ಆಣಿಮುತ್ತು. ಬೆಂಗಳೂರು ಏರ್ ಕ್ರಾಫ್ಟ್ ಫ್ಯಾಕ್ಟರಿಯಲ್ಲಿ ಕವಿ ಕೆಲಸದಲ್ಲಿದ್ದಾಗ ಪಟ್ಟ ಪಾಡನ್ನು ನೆನೆದು, ಮನಸ್ಸನ್ನು ಕಹಿ ಮಾಡಿಕೊಳ್ಳದೆ ಲೋಕಕ್ಕೆ ನಗೆಮೊಗವನ್ನು ತೋರಿ, ನಗೆಯ ನಿರ್ಮಲ ಸಂದೇಶವನ್ನು ಸಾರುವ ಸ್ಥೈರ್ಯ, ಆಶಾವಾದ ಈ ಕವಿತೆಯಲ್ಲಿ ತುಂಬಿದೆ. 'ಬಾಳು ಬೇವು, ಅದನ್ನು ಬೆಲ್ಲವನಾಗಿಸೋಣ' ಎಂಬ ಧೀಃಶಕ್ತಿ ಪ್ರಶಂಸನೀಯವಾಗಿದೆ. ಇವರ 'ದುರಂತ ಚಿತ್ರಗಳು' ಎಂಬ ಕತಾಸಂಗ್ರಹ ಬೆಂಗಳೂರು ಪ್ರಗತಿಶೀಲ ಲೇಖಕರ ಸಂಘದಿಂದ ಪ್ರಕಟಿಸಲ್ಪಡುತ್ತದೆ.

**೬. ದೇಸಾಯಿ ದತ್ತಮೂರ್ತಿ**

ಹುಬ್ಬಳ್ಳಿಯ ಶ್ರಮಜೀವಿ ಲೇಖಕರು. ಕೆಲವು ಮಾಸಪತ್ರಿಕೆಗಳಲ್ಲಿ ಇವರ ಕವಿತೆಗಳು ಅಚ್ಚಾಗಿವೆ. ಸುಭಗವಾದ ಶೈಲಿ. ಇವರ ಕವಿತೆಗಳಲ್ಲಿ ಪ್ರಾಗತಿಕ ಮನೋಭಾವ ಚೆನ್ನಾಗಿ ಒಡಮೂಡಿದೆ. ಗ್ರಂಥಸ್ಥ

ಶೈಲಿಯಲ್ಲದೆ ಉತ್ತರ ಕರ್ನಾಟಕದ ಗ್ರಾಮಶೈಲಿಯಲ್ಲಿಯೂ ದತ್ತ ಮೂರ್ತಿಗಳು ಸುಂದರವಾಗಿ ಬರೆಯಬಲ್ಲರು. ಇವರ ಕವಿತೆಗಳ ಸಂಗ್ರಹವನ್ನು ಕೆಲವು ಗೆಳೆಯರು ಪ್ರಕಟಿಸುವ್ರದಾಗಿ ತಿಳಿದುಬಂದಿದೆ. ನಾವೀಗಲೇ ಅದಕ್ಕೆ ಹಾರ್ದಿಕ ಸ್ವಾಗತ ಬಯಸುತ್ತೇವೆ.

## ೬. ವಿ. ಜಿ. ಭಟ್ಟ

ಉತ್ತರ ಕನ್ನಡ ಜಿಲ್ಲೆಯ ಸಾಹಿತಿಗಳು. ಕೊಲ್ಹಾಪುರದ ಲಾ ಕಾಲೇಜಿನಲ್ಲಿ ಅಭ್ಯಸಿಸುತ್ತಿದ್ದಾರೆ. ಇವರ ಒಲುಮೆ ಕವಿತೆಯ ಕಡೆಗೆ ಹೆಚ್ಚು. ಪ್ರಕೃತಿಯ ಆಡುಂಬೊಲವಾದ ಉತ್ತರ ಕನ್ನಡ ಜಿಲ್ಲೆಯಿಂದ ಸಾಕಷ್ಟು ಸಾಹಿತಿಗಳು ಬರದಿರುವುದು ಕನ್ನಡಿಗರ ದೌರ್ಭಾಗ್ಯ. ಭಟ್ಟರು ಆ ಕೊರತೆಯನ್ನು ತುಂಬುತ್ತಾರೆಂದು ನಮ್ಮ ನಂಬಿಕೆ.

## ೭. ಅ. ಸೋಗಾಲ

ದೃಷ್ಟಿಯಲ್ಲಿ ವೃತ್ತಿಯಲ್ಲಿ ಸೋಗಾಲರು ಸುತರಾಂ ಮಾರ್ಕ್ಸ್ ವಾದಿಗಳು. ಸಬಲ ಗದ್ಯಶೈಲಿ ಇವರಿಗೆ ಕರತಲಾಮಲಕ. ಬೆಂಗಳೂರಿನ ಇಂಜನಿಯರಿಂಗ್ ಕಾಲೇಜಿನಲ್ಲಿ ಓದುತ್ತಿದ್ದಾರೆ. ನಮ್ಮ 'ಮ್ಯಾಕ್ಸಿಂ ಗಾರ್ಕಿ' ಗ್ರಂಥ ಓದಿದವರಿಗೆ ಸೋಗಾಲರು ಚಿರಪರಿಚಿತರು.

## ೮. ಜೋಗಳೇಕರ ಪಾಂಡುರಂಗರಾಯ

ಹಾವೇರಿಯ ಪ್ರೌಢವಿದ್ಯಾಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ. 'ಜಯ ಕರ್ನಾಟಕ' ದಲ್ಲಿ ಇವರು ಬರೆದ ರಾಮಾಯಣದ ಸಂಶೋಧನಾತ್ಮಕ ಲೇಖನಗಳು ಅಲ್ಲೋಲಕಲ್ಲೋಲವನ್ನುಂಟುಮಾಡಿದವು. ಕ್ರಾಂತಿ ಕಾರಕ ಮನೋಭಾವ ಪಾಂಡುರಂಗರಾಯರದು. ಜೀವನವೂ ಕ್ರಾಂತಿ ಮಯ. ಇಂಗ್ಲಿಷ್, ಮರಾಟಿ ಭಾಷೆಗಳಲ್ಲಿ ಅಸಾಧಾರಣ ಪರಿಶ್ರಮ. ಮರಾಟಿ ಭಾಷೆಯಲ್ಲಿ ಪ್ರಸಿದ್ಧ ಲೇಖಕರೆಂದು ರಾಯರಿಗೆ ಖ್ಯಾತಿ. ಇವರ ಲೇಖನಗಳು ಪ್ರಸಿದ್ಧ ಮರಾಟಿ ಪತ್ರಿಕೆಗಳಿಗೊಂದು ಹಬ್ಬದೂಟ.

## ೧೦. ಕೆ. ಚನ್ನಬಸಪ್ಪ

ಬಳ್ಳಾರಿಯ ಪ್ರಗತಿಶೀಲ ಲೇಖಕರು. ಬೆಳಗಾಂವಿಯಲ್ಲಿ ಲಾ ಪರೀಕ್ಷೆಗೆ ಓದುತ್ತಿದ್ದಾರೆ. ಕೆಚ್ಚಿನ ಕನ್ನಡಿಗರು. ರಾಷ್ಟ್ರೀಯ ಆಂದೋಲನದಲ್ಲಿ ಹಲವು ಸಲ ಕಾರಾಗಾರವಾಸವನ್ನನುಭವಿಸಿದ್ದಾರೆ. ತಮ್ಮ ಅನುಭವಗಳನ್ನೇ ಹಲವು ಸುಂದರ ಸಣ್ಣ ಕಥೆಗಳನ್ನಾಗಿ ಬರೆದಿದ್ದಾರೆ. ಇವರ ವ್ಯಕ್ತಿತ್ವಕ್ಕೆ ಇವರ ಒಂದು ಪತ್ರದ ಕೆಳಗಿನ ಸಾಲುಗಳೇ ಸಾಕ್ಷಿ. "ನಮಗೆ ಅಗತ್ಯವಿರುವುದು ಸೌಜನ್ಯವಲ್ಲ, ಮೌನವಲ್ಲ, ಶಾಂತಿಯಲ್ಲ, ಬೇಕು ನಮಗೆ ಕೆಚ್ಚು. ಈ ಬ್ರಿಟಿಷ್ ಸಾಮ್ರಾಜ್ಯದ ಹುಟ್ಟಳಿಸುತ್ತೇವೆ ಎನ್ನುವಂಥಾದ್ದು ಬೇಕು ನಮಗೆ ಉದ್ಧಟತನ: ನೀಚ ಶ್ರೀಮಂತರ ಕೊಬ್ಬು ಕರಗಿಸುತ್ತೇವೆನ್ನುವ ಸೊಕ್ಕು ಬೇಕು: ಪರರಾಳ್ವಿಕೆಗೆ ಮಣಿಯೆವೆಂಬ. ಆದಕಾರಣ ಈಗಿನ ಯುವಕರಲ್ಲಿ ಅಂಥಾ ಉದ್ಧಟತನವಿದ್ದರೆ ಅದನ್ನು ಚಿವುಟಿ ಹೇಡಿಗಳನ್ನಾಗಿಸುವುದು ಬೇಡ ಎಂದೇ ನನ್ನ ಭಾವನೆ. (ಹಿರಿಯರೇ ಗಮನಿಸಿ— ಸಂ.) .... ಈ ಕೆಚ್ಚು, ಈ ಸೊಕ್ಕು, ಈ ಉದ್ಧಟತನ ನನ್ನ ಕವಿತೆಗಳಲ್ಲಿ ಕಾಣಬಹುದು. ಒಂದೆಡೆ ಧನಿಕರಿಂದ ದರಿದ್ರರಿಗಾಗುತ್ತಿರುವ ಅನ್ಯಾಯ, ಅವಮಾನವನ್ನು ನೋಡಿ ಕಣ್ಣೀರು ಕರೆದರೆ, ಮತ್ತೊಂದೆಡೆ 'ರೋಷಾಹಿ ಹೆಡೆಯೆತ್ತಿ ಭೋರ್ಗರೆವುದಳಲಿಂದೆ ಹೊತ್ತ ಭೂಮಿಯ ಬಿಸುಡಿಬಿಡುವೆನೆಂಬಂತೆ' ಆಗ ಕ್ರಾಂತಿ ಕ್ರಾಂತಿ ಎಂದು ಹಾತೊರೆಯುತ್ತೇನೆ............ಈ ಮೂರು ಕವಿತೆಗಳು ಬಂಗಾಳದ ಬರಗಾಲ ಅತ್ಯಂತ ಭೀಕರಾವಸ್ಥೆಯಲ್ಲಿದ್ದಾಗ ಬರೆದವು. ಪ್ರತಿದಿನವೂ ಪತ್ರಿಕೆಯಲ್ಲಿ ಸತ್ತವರ ಸಂಖ್ಯೆಯನ್ನು ಕಂಡು 'ಎದೆ ಜಲ್' ಎನ್ನುತ್ತಿತ್ತು. ಬೀದಿಯಲ್ಲಿ ಬಿದ್ದು ಸತ್ತವರ ಚಿತ್ರ ನೋಡಿ ಕರುಳು ಕಿವುಚುತ್ತಿತ್ತು. ಅಯ್ಯೋ ಎನ್ನುವಂತಾಗುತ್ತಿತ್ತು. ಆದರೆ ನನಗೆ 'ಮೂವತ್ತು ಮೂರು ಕೋಟಿ' 'ಕಲಕತ್ತೆಯ ಬೀದಿಗಳಲ್ಲಿ' 'ಕಂಗಾಲ ಬಂಗಾಲ' 'ಬರದ ಮಾರಿ' ಎನ್ನುವಂತಹ ಕವಿತೆಯನ್ನು ಬರೆಯುವ ಮನಸ್ಸಾಗಲಿಲ್ಲ........ಅಲ್ಲಿಯ ಸ್ಥಿತಿ ನೋಡಿ ಹಾಗೆ ಹೀಗೆ ಎಂದರೆ ಬಂದದ್ದೇನು? ದುರ್ದಮನೀಯ, ಭೀಕರ ಎಂದು ನೂರು ಗುಣನಾಮಗಳಿಂದ ವರ್ಣಿಸಿದರೆ ಬರುವುದೇನು? ಆ ಭೀಕರ ಪರಿಸ್ಥಿತಿಗೆ ಕಾರಣವೇನು? ಎಂದು

ಕಂಡು ಬೇರಿಗೆ ಬೆಂಕಿಯಿಟ್ಟರೆ ಮರ ತಾನಾಗಿಯೇ ಹೋಗುತ್ತದೆ. ಆದ್ದರಿಂದ ಕಳುಹಿಸಿರುವ ಮೂರು ಕವನಗಳು ಬಂಗಾಲಕ್ಕೆ ಸಂಬಂಧ ಪಟ್ಟಿದ್ದಾದರೂ ಬಂಗಾಲದ ಹೆಸರಿಲ್ಲ! ಬಂಗಾಲದ ಹೆಸರು ತಂದು ಬಿಟ್ಟರೆ ನಮ್ಮ ಸಂಪ್ರದಾಯದ ಮಡಿವಂತರು ಇದು 'ಪ್ರಚಾರಕ ಸಾಹಿತ್ಯ' 'ಅಲ್ಪಾಯು' 'ಚಿರಸ್ಥಾನವಿಲ್ಲ' ಎಂದು ಮೂಗು ಮುರಿಯುತ್ತಾರೆ. ಆದರೆ ಈ ಕವನಗಳನ್ನು ನೋಡಿದರೆ ಬಂಗಾಲ ಬರಗಾಲಕ್ಕೆ ಕಾರಣವಾದ ಬಂಡವಾಳಗಾರರ ಅಳ್ವಿಕೆ, ಧನಿಕರ ಲಾಭಬಡುಕತನ, ಅವರ ನಿರ್ಲಜ್ಜ ವೃತ್ತಿಯನ್ನು ಕಾಣಬಹುದು. ಈ ಕವಿತೆಗಳು ಯಾವ ಸಂದರ್ಭಕ್ಕಾದರೂ ಹೊಂದಿಕೊಳ್ಳುತ್ತವೆ. ವಾಸ್ತವಿಕವಾಗಿ ಕಾಣುವುದನ್ನು ಇದ್ದಕ್ಕಿದ್ದಂತೆ ಚಿತ್ರಿಸುವುದರಿಂದ 'ಅಯ್ಯೋ' ಎನ್ನುವ ಉದ್ಗಾರವನ್ನು ಹುಟ್ಟಿಸಬಹುದು. ಅವರೆದೆಯನ್ನು ತಳಮಳಗೊಳಿಸಬಹುದು. ಆದರೆ ಆ ಭೀಕರ ಪರಿಸ್ಥಿತಿಗೆ ಕಾರಣವೇನೆಂಬುದನ್ನು ತಿಳಿಸಿ ಪರಿಹಾರ ಮಾರ್ಗವನ್ನು ಸೂಚಿಸಿದರೆ ಇನ್ನೂ ಹೆಚ್ಚು ಉತ್ತಮ ಎಂದು ನನ್ನ ಭಾವನೆ."

## ೧೧. ಈಶ್ವರ ಸಣಕಲ್ಲ

ಬೆಳಗಾಂವಿಯ ಪ್ರಗತಿಶೀಲ ಲೇಖಕರು. ಉತ್ತಮ ಕವಿಗಳು. ಬಾಳದಳ್ಳುರಿಯ ಅನುಭವ ಚೆನ್ನಾಗಿ ಇವರ ಕೃತಿಗಳಲ್ಲಿ ಪ್ರತಿಬಿಂಬಿಸುತ್ತದೆ. ಇವರ ಮೊದಲಿನ ಕವಿತೆಗಳಲ್ಲಿ ಅಧ್ಯಾತ್ಮವಾದ ಕಂಡುಬರುತ್ತಿತ್ತು. ಈಗ ಕ್ರಾಂತಿವಾದ ಎತ್ತಿ ಕಾಣುತ್ತದೆ. ಗದ್ಯಪದ್ಯಗಳೆರಡರಲ್ಲಿಯೂ ಇವರ ಶೈಲಿ ಸುರಿತಿದೆ.

## ೧೨. ಡಿ. ಎಸ್. ಕರ್ಕಿ

ಬೆಳಗಾಂವಿಯಲ್ಲಿ ಅಧ್ಯಾಪಕರಾಗಿದ್ದಾರೆ. ಅಲ್ಲಿಯ 'ಕಿರಿಯರ ಬಳಗ'ದ ಆಧಾರಸ್ತಂಭರಾಗಿ ಕಿರಿಯರಲ್ಲಿ ಸಾಹಿತ್ಯ ಅಭಿರುಚಿಯ ಪ್ರಸಾರವನ್ನು ಯಶಸ್ವಿಯಾಗಿ ಮಾಡುತ್ತಿದ್ದಾರೆ. ಯಾವುದೂ ಆಡಂಬರಕ್ಕೆ ಹೋಗದ ಕರ್ಕಿಯವರು ಸರಳ ಸೌಜನ್ಯತೆಯ ಮೂರ್ತಿಗಳಾಗಿದ್ದಾರೆ. ಉತ್ತಮ

ಕವಿತೆಗಳನ್ನು ಬರೆದಿದ್ದಾರೆ. ಬಳಗದಿಂದ ಪ್ರಕಟವಾಗಿರುವ 'ದುಂಬಿ' ಕವಿತಾ ಸಂಗ್ರಹವೂ, 'ತಿರುಗಣಿ' ಕಥಾಸಂಗ್ರಹವೂ ಕರ್ಕಿಯವರ ದುಡಿಮೆಯ ಫಲ.

೧೩. ಎಸ್. ಡಿ. ಇಂಚಲ

ಬೆಳಗಾಂವಿಯ 'ಕಿರಿಯರ ಬಳಗ'ದ ಮತ್ತೊಬ್ಬ ಉತ್ಸಾಹಿ ಕಾರ್ಯಕರ್ತರು ಮತ್ತು ಉತ್ತಮ ಸಾಹಿತಿಗಳು. ಇವರ ಕವಿತೆಗಳಲ್ಲಿ ಓಜಸ್ಸಿದೆ, ರಸಸಿದ್ಧಿಯಿದೆ.

——:——

# ಕೆಲವು ಗ್ರಾಮ್ಯಶಬ್ದಗಳ ಅರ್ಥ

ಪುಟ.

೧೪. ಬಾಲ್ದಿ = ಬಕೆಟ್.

೧೫. ಸ್ಯಾಬರೆ= ಸಾಹೇಬರೆ ; ಪೈಗಳೆ, ಪ್ರಭುಗಳೆ= ಮಂಗಳೂರು ಕಡೆಯ ಸೌಡಸಾರಸ್ವತರಲ್ಲಿನ ಹೆಸರು ಸೂಚಕ. ರೈಗಳೆ= ಬಂಟ ಸಮಾಜವರ ಹೆಸರು.

೨೩. "ಪೈಂದ= ಮುದರ" ಮೊದಲ್ಗೊಂಡು ನಾಲ್ಕುಸಾಲು—ಹರಿಜನರ ಹೆಸರುಗಳು.

ಥಂ, ಕ, ಡ, ಥ, ಣ—ಈ ಹಾಡಿನಲ್ಲಿ ನಾಲ್ಕನೇ ಸಾಲು ಬಿಟ್ಟು ಹೋಗಿದೆ. ಅದನ್ನು "ಅತ್ತಲಿತ್ತ ಕೈ ಕುಲುಕಿಸಿ"—ಕೂಡಿಸಿಕೊಳ್ಳಬೇಕು.

೨೪. ದಟ್ಟಿಗೆ= ಹೊಲೆಯರ ಗುಡಿಸಲು.

೫೧. ಅದಕಂತ = ಅದಕ್ಕಾಗಿಯೇ, ಅಂತೆಯೆ.

ಕೂಡುವ= ಕುಳಿತುಕೊಳ್ಳುವ, ಸುಮ್ಮನಿರುವ.

೫೨. ಮುರಸ್ಯಾವು= ಮುರಿಯಿಸಬಹುದು. ಅತ್ತಂತ್ತ = ಅಭದ್ರ.

೫೩. ಎದೆಗುದಿ= ಅಂಜಿಕೆ.

ಪಜ್ಜೇನ= ಭಾರವೇನೇ ?

ಜೆಂಡು ಬೆತ್ತಾಸ= ಉತ್ತರ ಕರ್ನಾಟಕದಲ್ಲಿ ಸಕ್ಕರೆಯಿಂದ ತಯಾರಿಸುವ ಒಂದು ತಿನಿಸು.

೬೧. ಅಪ್ದಾನ್= ಸಾಕಷ್ಟು ಹೆಚ್ಚಾಗಿ

ಖರೆ= ನಿಜ, ಸತ್ಯ.

೬೩. ಹರಸದ= ಹರುಷದ

ಕಮುರೀಸ್= ಕಮರಿಸು, ಒಣಗಿಸು

ನೀರಾಸ್= ನಿರಾಶೆ

೬೪. ನೆಪ್ಪು= ನೆನಪು

ತಾಕತ್= ಶಕ್ತಿ

—:—

## ಅ. ನ. ಕೃಷ್ಣರಾಯರ ಗ್ರಂಥಗಳು

**ಕಾದಂಬರಿ**

*ಜೀವನಯಾತ್ರೆ
ಉದಯರಾಗ
ಸಂಧ್ಯಾರಾಗ
*ಮಂಗಳಸೂತ್ರ
ನಟ ಸಾರ್ವಭೌಮ

**ಕಥೆ**

*ಮಿಂಚು
*ಕಿಡಿ
*ಜಾತಿಹೀನನ ಮನೆಯ ಜ್ಯೋತಿ
*ಕಾಮನ ಸೋಲು
ಪಾಪ-ಪುಣ್ಯ

**ಜೀವನ ಚರಿತ್ರೆ**

*ಬಸವಣ್ಣನವರ ಅಮೃತವಾಣಿ
ಸ್ವಾಮಿ ವಿವೇಕಾನಂದ

**ಸಂಪಾದಿತ**

ಮರುಳು ಸಿದ್ಧೇಶ್ವರ ಕಾವ್ಯ

**ಪ್ರಬಂಧ**

*ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ
ಹೊಸ ಹುಟ್ಟು
ರಾಜಾ ರವಿವರ್ಮ
ಸಾಹಿತ್ಯ ಮತ್ತು ಜೀವನ

**ನಾಟಕ**

*ಮದುವೆಯೋ - ಮನೆ ಹಾಳೋ
*ಆಹುತಿ
*ಆದದ್ದೇನು
*ಗೋಮುಖ ವ್ಯಾಘ್ರ
ಎರಡು ನಾಟಕಗಳು
ಬಣ್ಣದ ಬೀಸಣಿಗೆ

**ಸಂಕಲನ**

*ಪ್ರಣಯ ಗೀತಗಳು
*ಕಾಮನ ಬಿಲ್ಲು
ಭಾರತೀಯ ಕಥಾಸಾಹಿತ್ಯ
ಪ್ರಗತಿಶೀಲ ಸಾಹಿತ್ಯ
ರಸಋಷಿ

**ಇತರ**

ನನ್ನನ್ನು ನಾನೇ ಕಂಡೆ

### ಅಚ್ಚಿನಲ್ಲಿ

ಭಗವದ್ಗೀತಾರ್ಥಸಾರ (ಸಂಪಾದಿತ)
ಕರುಳಿನ ಕೂಗು (ಕಾದಂಬರಿ)
ಮಹಾದೇವಿಯಕ್ಕನ ಮುಕ್ತವಾಣಿ (ಜೀವನ ಚರಿತ್ರೆ)
ಯುಗಪುರುಷ ಲೆನಿನ್ (ಜೀವನ ಚರಿತ್ರೆ)
KANNADA POETRY - THEN AND NOW (A Study)
SHORT STORIES
LIFE AND TEACHINGS OF BASAVESWARA.
LIFE AND TEACHINGS OF ALLAMA PRABHU
OMAR KHAYYAM (A Study)

---

* ಪ್ರತಿಗಳು ಸಿಕ್ಕುವುದಿಲ್ಲ.

# ನಮ್ಮ ಪ್ರಕಟನೆಗಳು

---

೧. ಭಾರತೀಯ ಕಥಾಸಾಹಿತ್ಯ (ಕಾಮನಬಿಲ್ಲು ಭಾಗ ೨) : ಸಂ. ಅ. ನ. ಕೃ.

೨. ಮರುಳಸಿದ್ಧ ಕಾವ್ಯ : ಸಂ. ಅ.ನ. ಕೃಷ್ಣರಾಯ

೩. ರಸಋಷಿ (ಪ್ರಗತಿಶೀಲ ಕಾವ್ಯಸಂಗ್ರಹ) : ಸಂ. ಅ.ನ. ಕೃಷ್ಣರಾಯ

೪. ಮ್ಯಾಕ್ಸಿಂ ಗಾರ್ಕಿ (ಜೀವನ, ಕೃತಿ, ಸಾಹಿತ್ಯ ಪರಿಚಯ) : ಸಂ. ಅ.ನ. ಕೃ.

೫. ತಲೆಹರಟೆ : ನಾಡಿಗೇರ ಕೃಷ್ಣರಾಯ

೬. ನನ್ನನ್ನು ನಾನು ಕಂಡೆ : ಅ.ಸ. ಕೃಷ್ಣರಾಯ

೭. ಪ್ರಗತಿಶೀಲ ಸಾಹಿತ್ಯ : ಸಂ. ಅ.ನ. ಕೃಷ್ಣರಾಯ

೮. ಶ್ರೀ ಬಸವಣ್ಣನವರ ಅಮೃತವಾಣಿ : ಅ.ನ. ಕೃಷ್ಣರಾಯ

೯. ಪಾಪ - ಪುಣ್ಯ (ಸಣ್ಣ ಕಥೆಗಳು) : ಅ.ನ. ಕೃಷ್ಣರಾಯ

೧೦. ಕರ್ನಾಟಕ ಗತವೈಭವ : ಆಲೂರ ವೆಂಕಟರಾಯರು

೧೧. ಕರ್ನಾಟಕ ವೀರರತ್ನಗಳು : ಆಲೂರ ವೆಂಕಟರಾಯರು

೧೨. ಅಶಾಂತಿಪರ್ವ : ಆನಂದಕಂದ

೧೩. ಸಂಧ್ಯಾರಾಗ : ಅ.ನ. ಕೃಷ್ಣರಾಯ

೧೪. ತಮಿಳು ಕಥೆಗಳು : ಸಂ. ಸಿದ್ದವನಹಳ್ಳಿ ಕೃಷ್ಣಶರ್ಮ

೧೫. ತೆಲುಗು ಕಥೆಗಳು : ಸಂ. ಸಿದ್ದವನಹಳ್ಳಿ ಕೃಷ್ಣಶರ್ಮ

೧೬. ಅಸಾಮಿ ಕಥೆಗಳು : ಸಂ. ಸಿದ್ದವನಹಳ್ಳಿ ಕೃಷ್ಣಶರ್ಮ

೧೭. ಎರಡು ನಾಟಕಗಳು : ಅ.ನ. ಕೃಷ್ಣರಾಯ

೧೮. ಅಭಿನವ ಪಂಪ :- ಕರ್ನಾಟಕ ಸಂಘ, ಧಾರವಾಡ

೧೯. ಸಾಹಿತ್ಯ ಮತ್ತು ಜೀವನ : ಅ.ನ. ಕೃಷ್ಣರಾಯ

---:---

**ಕರ್ನಾಟಕ ಸಾಹಿತ್ಯ ಮಂದಿರ**

ಧಾರವಾಡ

# ಮುಂದಿನ ನಿಯೋಜನೆ

**ಕಾಮನ ಬಿಲ್ಲು (ಭಾಗ ೧)** ಕರ್ನಾಟಕದ ಸ್ತ್ರೀಲೇಖಿಕೆಯರ ಕಥಾ ಸಂಗ್ರಹ. ೨೪ ಕಥೆಗಳು. ವ್ಯಕ್ತಿ ಪರಿಚಯ, ಸಾಹಿತ್ಯ ವಿಮರ್ಶೆ ಸುದೀರ್ಘ ಮುನ್ನುಡಿ.

**ಕಾಮನ ಬಿಲ್ಲು (ಭಾಗ ೨)** ಕರ್ನಾಟಕದ ಲೇಖಕರ ಕಥಾಸಂಗ್ರಹ. ಮೊದಲನೆಯ ಭಾಗದಲ್ಲಿ ಬರದಿರುವ ೨೪ ಕಥೆಗಾರರ ಕಥೆಗಳು, ಪರಿಚಯ, ವಿಮರ್ಶೆ, ಮುನ್ನುಡಿ.

**ಕಾಮನ ಬಿಲ್ಲು (ಭಾಗ ೩)** ರಷ್ಯಾದ ಕಥಾಸಾಹಿತ್ಯ. ಕ್ರಾಂತಿಪೂರ್ವದ ಮತ್ತು ಕ್ರಾಂತಿಯಾನಂತರ ಬಂದ ರಷ್ಯಾದ ಕಥೆಗಾರರ ೨೪ ಕಥೆಗಳು. ಪರಿಚಯ, ವಿಮರ್ಶೆ, ರಷ್ಯಾದ ಕಥಾಸಾಹಿತ್ಯಚರಿತ್ರೆಗಳೊಡನೆ.

**ತಾಯಿಯ ಕರುಳು :** ಅ. ನ. ಕೃಷ್ಣರಾಯರ ಹೊಸ ಕಾದಂಬರಿ. ಹೆಣ್ಣಿನ ಮನೋಭಾವದ ಮೇಲೆ ಹೊಸ ಕ್ಷ- ಕಿರಣ.

**ಹೊಗೆ - ಧೂಳು :** ಕೆ. ನಾಗೇಶರಾಯ. ಕಾರ್ಖಾನೆಯ ಕೆಲಸಗಾರರ ನಿಜಜೀವನವನ್ನು ಚಿತ್ರಿಸುವ ಪ್ರಗತಿಶೀಲ ಕಾದಂಬರಿ.

**ಕಣ್ಣುಮುಚ್ಚಾಲೆ :** ಅ. ನ. ಕೃಷ್ಣರಾಯರ ಹೊಸ ೧೨ ಕಥೆಗಳು.

KANNADA POETRY - THEN AND NOW : A.N. Krishna Rao.
A critical review of the development of Poetry in Kannada. The writer analyses the works of all masters in the Kannada Poetic realm and indicates the new trend.

OMAR KHAYYAM - A. N. Krishna Rao
The much - maligned Philosopher poet vindicated. A rational approach to the works of Omar Khayyam.

SHORT STORIES : A. N. Krishna Rao
A choice selection of the author's short stories selected and translated from the Original Kannada.

LIFE AND TEACHINGS OF SRI BASAVESWARA : A. N. K.
A full-length Biogrophy of the Great Saint and rebel who sponsered a Proletarian revolution in Karnataka during the twelfth century. Copious excerpts from his teachings admirably translated.